ಶರಣ ಸಾಹಿತ್ಯ ಗ್ರಂಥಮಾಲಾ.೪. 

ಪಾಲಕುರಿಕಿ ಸೋಮನಾಥ ಮಹಾಕವಿ
ವಿ ರ ಚಿ ತಂ

# ಶ್ರೀ ಬಸವೋದಾಹರಣಂ





ಸಂಪಾದಕರು :
ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ
ಬ. ಶಿವಮೂರ್ತಿಶಾಸ್ತ್ರೀ,
ಬೆಂಗಳೂರು.

೧೯೫೨ ಬೆಲೆ: ೧-೦-೦

ಶರಣ ಸಾಹಿತ್ಯ ಗ್ರಂಥಮಾಲಾ-೪.

ಪಾಲಕುರಿಕಿ ಸೋಮನಾಥ ಮಹಾಕವಿ

ವಿರಚಿತಂ

# ಶ್ರೀ ಬಸವೋದಾಹರಣಂ

ಟಿಪ್ಪಣಿ ಕರ್ತಾ-

ಮಾಹೇಶ್ವರ ಮಠಾಧೀಶ್ವರ, ಶಿವಾದ್ವೈತ ದರ್ಶನಾಚಾರ್ಯ, ನವೀನ-ನ್ಯಾಯ-ವ್ಯಾಕರಣ ವಿದ್ವಾನ್, ವೇ|| ಟಿ. ಆರ್. ವಿರೋಚನ ಶರ್ಮಾ, ಶಿವಾದ್ವೈತ ಅಸಿಸ್ಟೆಂಟ್ ಪ್ರೊಫೆಸರ್, ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜು.

ಬೆಂಗಳೂರು ನಗರ.



ಸಂಪಾದಕರು :

ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ

**ಬಿ. ಶಿವಮೂರ್ತಿ ಶಾಸ್ತ್ರೀ,**

ಬೆಂಗಳೂರು.

# ಪ್ರಕಾಶಕರ ಮಾತುಗಳು

ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ೪ನೇ ಕುಸುಮವಾಗಿ ವಿಕಾಸ ಗೊಂಡ ಶ್ರೀ ಬಸವೋದಾಹರಣಂ ಈ ಮೊದಲು ೧೯೪೪ರಲ್ಲಿ ಪ್ರಕಟವಾ ಯಿತು. ಆಗ ಗ್ರಂಥದ ಮೂಲ ಮತ್ತು 'ಕವಿಕಾವ್ಯ ವಿಚಾರ' ವಿಶೇಷ ವಿಚಾರ ಇವುಗಳನ್ನು ಮಾತ್ರ ಸೇರಿಸಿ ಗ್ರಂಥವನ್ನು ಪ್ರಕಟಿಸಿದೆವು. ಆ ಗ್ರಂಥ ಪ್ರಕ ಟನೆಗೆ ಚಿತ್ರದುರ್ಗ ಶೂನ್ಯ ಸಿಂಹಾಸನಾಧೀಶ್ವರರಾದ ಶ್ರೀ ಮನ್ಮಹರಾಜ ನಿರಂಜನ ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾ ಮಿಗಳು ಕೃಪೆಮಾಡಿ ೧೦೦ ರೂ. ಗಳನ್ನು ಆಶೀರ್ವದಿಸಿದರು-

ಇತ್ತೀಚೆಗೆ ಗ್ರಂಥದ ಪ್ರತಿಗಳೆಲ್ಲವೂ ಖರ್ಚಾಗಿ ಹೋಗಿ ಮತ್ತೆ ಮತ್ತೆ ಜನರ ಬೇಡಿಕೆ ಹೆಚ್ಚಾಯಿತು. ಹಲವರು ಹಿತಚಿಂತಕರು ಈ ಗ್ರಂಥಸ್ಥ ವೃತ್ತಗಳು ತುಂಬಾ ಪ್ರೌಢವಾಗಿರುವುದರಿಂದ ಇದಕ್ಕೆ ಕನ್ನಡದ ಅರ್ಥ ತಾತ್ಪರ್ಯ ಬರೆಸಬೇಕೆಂದು ಸೂಚಿಸಿದರು. ಆದುದರಿಂದ ಈ ದ್ವಿತೀಯ ಮುದ್ರಣದಲ್ಲಿ ಉಪಯುಕ್ತವಾದ ಕನ್ನಡ ಟಿಪ್ಪಣಿ-ತಾತ್ಪರ್ಯ ಬರೆಸಿ ಪ್ರಕಟಿಸ ಲಾಗಿದೆ. ಇದರಿಂದ ವಾಚಕರಿಗೆ ಮೂಲಗ್ರಂಥದ ಭಾವವು ಸುಲಭವಾಗಿ ತಿಳಿ ಯುವುದೆಂದು ನಂಬ ಬಹುದಾಗಿದೆ.

ಬೆಂಗಳೂರು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ವೀರಶೈವ ಸಿದ್ಧಾಂತಕ್ಕೆ ಉಪ ಪ್ರಾಧ್ಯಾಪಕರಾಗಿರುವ ನ್ಯಾಯ–ವ್ಯಾಕರಣ ವಿದ್ವಾನ್ ಶ್ರೀ ಟಿ. ಆರ್. ವಿರೋಚನಶರ್ಮರು ನಮ್ಮ ಕೋರಿಕೆಯಂತೆ ಈ ಗ್ರಂಥಕ್ಕೆ ಟಿಪ್ಪಣಿ ತಾತ್ಪರ್ಯಗಳನ್ನು ಬರೆದುಕೊಟ್ಟು, ಪಾಠಾಂತರಗಳನ್ನು ಹಾಕಿಕೊಟ್ಟು ನಮಗೆ ಉಪಕಾರ ಮಾಡಿದ್ದಾರೆ. ಇದಕ್ಕಾಗಿ ಅವರಿಗೆ ನಮ್ಮ ವಂದನೆಗಳು. ಈ ಗ್ರಂಥ ಕ್ಕೆ ಉಪಯುಕ್ತ ಪ್ರಸ್ತಾವನೆ ಬರೆದು ಕೊಟ್ಟು ಅನುಗ್ರಹಿಸಿದ ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಮಹಾ ದೇವಸ್ವಾಮಿಗಳು ಅವರಿಗೆ ನಮ್ಮವಂದನೆಗಳು.

ದಿನಾಂಕ: ೨೭-೧೧-೧೯೫೨ — ವ್ಯವಸ್ಥಾಪಕ,

ಬೆಂಗಳೂರು — ಎಚ್. ಎಸ್. ರೇಣುಕಪ್ರಸಾದ್ ಬಿ.ಎ.,

## ವಿಷಯ ಸೂಚಿಕೆ

# ಸಮರ್ಪಣೆ

ಶಿವಭಕ್ತಿ ಶಿವಯೋಗ ಸಂಪನ್ನರೂ, ಕನ್ನಡ ಸಾಹಿತ್ಯ ಸಂಸ್ಕೃತಿಗಳ
ಉದ್ಧಾರಕರೂ, ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ,
ಮೈಸೂರು ಮಹಾರಾಜರೂ, ಮಹಾನುಭಾವಿಗಳೂ ಆದ
**ಶ್ರೀ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್**
ಜಿ. ಸಿ. ಬಿ., ಜಿ. ಸಿ. ಎಸ್. ಐ. **ಮಹಾಸ್ವಾಮಿಯವರ**
ದಿವ್ಯ ಸನ್ನಿಧಿಗೆ ಅಪ್ಪಣೆಯನ್ನು ಪಡೆದು ಈ ಗ್ರಂಥವನ್ನು
ರಾಜಭಕ್ತಿ ಪೂರ್ವಕವಾಗಿ ಸಮರ್ಪಿಸಲಾಗಿದೆ.

ತಾ. ೯-೧೨-೧೯೪೨
ಬೆಂಗಳೂರು.

ಸಂಪಾದಕ,
**ಬಿ. ಶಿವಮೂರ್ತಿ ಶಾಸ್ತ್ರೀ**



ಕರ್ನಾಟಕ ರತ್ನ ಸಿಂಹಾಸನಧೀಶ್ವರರೂ
ಮೈಸೂರಿನ ಶ್ರೀಮನ್ಮಹಾರಾಜರವರೂ ಆದ
**ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್**
ಜಿ. ಸಿ. ಬಿ., ಜಿ. ಸಿ. ಎಸ್. ಐ.

**ಮಹಾಸ್ವಾಮಿಯವರು**

# ಪ್ರಸ್ತಾವನೆ

ವಾಙ್ಮಯ ಪ್ರಪಂಚದಲ್ಲಿ ಕವಿ, ಗಮಕಿ, ವಾದಿ, ವಾಗ್ಮಿಗಳೆಂಬ ನಾಲ್ಕು ತೆರನಾದ ವ್ಯಕ್ತಿಗಳು ಮಹಾ ಶಕ್ತಿಯುಕ್ತರಾಗಿ ಬೆಳಗುತ್ತಿರುವರು. ಇವರುಗಳಲ್ಲಿ ಕವಿಯು ಮೊದಲಿಗನೆಂದು ಹೇಳಬಹುದು.'ರವಿ ಕಾಣದುದನ್ನು ಕವಿ ಕಂಡನು' ಎಂಬ ನಾಣ್ಣುಡಿಯು ಕವಿಗಳ ಹಿರಿಮೆಗೆ ನಿದರ್ಶನವಾಗಿದೆ.ಪ್ರಪಂಚದ ನಾನಾ ಭಾಷೆಗಳಲ್ಲಿ ಹಲವರು ಮಹಾಕವಿಗಳಾಗಿ ಹೋಗಿರುವಂತೆ, ನಮ್ಮ ಭಾರತದಲ್ಲಿಯೂ ಪ್ರಖ್ಯಾತರಾದ ಅಂತಹ ಹಲವರು ಕವಿಗಳು ಆಗಿದ್ದಾರೆ. ಆಸಾಲಿನಲ್ಲಿ ಆಂಧ್ರ ಭಾಷೆಯಲ್ಲಿ ಪಾಲಕುರಿಕೆ ಸೋಮನಾಥರು ಮಹಾ ಕವಿಗಳೆನಿಸಿಕೊಂಡಿದ್ದಾರೆ. ಅವರು ತೆಲುಗು ಭಾಷೆಯಲ್ಲಿ ಬಸವ ಪುರಾಣ, ಪಂಡಿತಾರಾಧ್ಯ ಚರಿತೆ, ಅನುಭವ ಸಾರ ಮೊದಲಾದ ಅನೇಕ ಗ್ರಂಥಗಳನ್ನು ಬರೆದಿರುವರಲ್ಲದೆ, ಸಂಸ್ಕೃತದಲ್ಲಿ ಕೂಡ ಸೋಮನಾಥ ಭಾಷ್ಯಂ (ಬಸವ ರಾಜೀಯಂ) ಮೊದಲಾದ ಹಲವು ಧರ್ಮ ಗ್ರಂಥಗಳನ್ನು ಬರೆದಿದ್ದಾರೆ. ಈ ಕವಿಗಳು ತಮ್ಮ ಗ್ರಂಥಗಳನ್ನೆಲ್ಲಾ ತಮ್ಮ ಆರಾಧ್ಯದೇವತೆಯಾದ ಶ್ರೀ ಬಸವೇಶ್ವರನಿಗೆ ಅಂಕಿತಮಾಡಿ ಆ ಮಹಾತ್ಮನನ್ನು ಅತ್ಯಂತ ಭಕ್ತಿಭಾವದಿಂದ ಕೊಂಡಾಡಿರುತ್ತಾರೆ. ಇವರು ತಮ್ಮ ವೃಷಾಧಿಪಶತಕದಲ್ಲಿ ಕನ್ನಡ–ಸಂಸ್ಕೃತ–ತೆಲುಗು–ತಮಿಳು–ಮರಾಠಿ ಎಂಬ ಐದು ಭಾಷೆಗಳಲ್ಲಿ ಶ್ರೀ ಬಸವೇಶ್ವರನನ್ನು ಮನಸಾರ ಸ್ತುತಿಸಿದ್ದಾರೆ.

ಈ ಮಹಾಕವಿಯ ವಿಚಾರವಾಗಿ ಸಂಪಾದಕರಾದ ಆಸ್ಥಾನ ವಿದ್ವಾನ್' ಪಂಡಿತರತ್ನಂ, ಕೀರ್ತನಾಚಾರ್ಯ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ವಿಸ್ತಾರವಾಗಿಯೂ, ಸಾಧಾರವಾಗಿಯೂ ಗ್ರಂಥದ ಅನುಬಂಧಗಳಲ್ಲಿ ವಿವರಿಸಿದ್ದಾರೆ. ನ್ಯಾಯ-ವ್ಯಾಕರಣ ವಿದ್ವಾನ್ ಶ್ರೀ ವಿರೋಚನ ಶರ್ಮರು ಈ ಗ್ರಂಥದ ಪ್ರೌಢವಾದ ಶ್ಲೋಕಗಳಿಗೆ ಉತ್ತಮವಾದ ಭಾವಾರ್ಥ–ಟಿಪ್ಪಣಿಗಳನ್ನು ಬರೆದುಕೊಟ್ಟು ನಾಡಿನಲ್ಲಿ ಈ ಗ್ರಂಥದ ಪ್ರಯೋಜನವನ್ನು ಹೆಚ್ಚಿಸಿದ್ದಾರೆ.

ಮಹಾ ಕವಿಗಳಾದ ಶ್ರೀ ಸೋಮನಾಥರು ಸಂಸ್ಕೃತ ಭಾಷೆಯಲ್ಲಿ ನಾನಾ ವೃತ್ತಗಳಿಂದೊಡಗೂಡಿದ ಅಪೂರ್ವವಾದ ಈ ಗ್ರಂಥದ ಕೇವಲ ೩೦ ಪದ್ಯಗಳಲ್ಲಿ ಮಹಾ ಮಹಿಮನಾದ ಶ್ರೀ ಬಸವೇಶ್ವರನ-ಅಗಾಧವಾದ ಚರಿತ್ರೆಯನ್ನು ಚಿತ್ರಿಸಿದ್ದು 'ಸಾಸಿವೆ ಕೊರೆದು ಸಾಗರವನ್ನು ತುಂಬಿದಂತಾಗಿದೆ' ಎಂದು ಹೇಳಬಹುದು. ಇಂತಹ ಸಾಹಸವು ಮಹಾಕವಿಗಳಿಗೆ ಮಾತ್ರ ಸಾಧ್ಯವೆಂದು ಹೇಳ ಬೇಕಾಗಿಲ್ಲವಷ್ಟೆ ? ಇದೇ ಮಹಾಕವಿಗಳು ಬಸವೇಶ್ವರನ ವಿಚಾರವಾಗಿ ಕನ್ನಡ ಕಂದ ಪದ್ಯಗಳಲ್ಲಿ–ಅಣ್ಣನವರ ೧೦೮ ಗುಣಗಳನ್ನು ಹೇಳುವಾಗ

ಕಂದ॥ ಬಸವರಸನ ನಾಮಾಮೃತ ।
ರಸ ಪರವಶನಾಗಿ ಸವಿದು ತುದಿನೊದಲಿಲ್ಲದೆ ॥
ಬಸವಾ ಬಸವಾ ಎನುತಿದ್ದೆನಯ್ಯ ।
ಬಸವ.......॥

ಇತ್ಯಾದಿ ಪದ್ಯಗಳನ್ನು ಪಠನ, ಪಾರಾಯಣಕ್ಕೆ ಉಪಯುಕ್ತವಾಗುವಂತೆ, ಪಂಡಿತ ಪಾಮರರ ಮನಂಬುಗುವಂತೆ ವರ್ಣಿಸಿರುತ್ತಾರೆ. ಅನುಭಾವಿಗಳಾದ ಬಸವಣ್ಣನವರ ವಿಷಯದಲ್ಲಿ ಯಾವ ಕವಿಗಳು ಎಷ್ಟು ವರ್ಣಿಸಿದರೂ ಅವರ ಗಂಭೀರವಾದ ಜೀವನ ಸಾಗರದ ತಳ ಮುಟ್ಟುವುದು ಕಷ್ಟ ಸಾಧ್ಯವಾದುದೆಂದು ಹೇಳಬಹುದು. ಕರ್ಣಾಟಕದ ಮಹಾಕವಿಯಾದ ಹರಿಹರ!ದೇವನು ತನ್ನ 'ಬಸವರಾಜ ದೇವರ ರಗಳೆ'ಎಂಬ ಕಾವ್ಯದಲ್ಲಿ ಅನೇಕ ತೆರದಿಂದ ಬಸವೇಶ್ವರನ ಪವಿತ್ರ ಜೀವನವನ್ನು ಚಿತ್ರಿಸಿ, 'ನಿನ್ನ ಗುಣಂಗಳಂ ಬಣ್ಣಿಸಲಳವಲ್ಲ, ಈಶನ ಮಿಾಸಲಪ್ಪ ಭಕ್ತ ನಿನ ಗೆಣೆಯಿಲ್ಲ, ಪಡಿಯಿಲ್ಲ, ಪಾಸಟಿಯಾವಂ, ಪಾಷಂಡ ಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯ ಮುಂಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸಫಲಮುಂ ಮಾಡಲೆಂದು ಬಂದ ಕಾರಣಿಕ ಬಸವಾ ನಿನ್ನದೆಸೆಯಿಂದೆಮ್ಮ ಭಕ್ತಿ ಬಣ್ಣವೇರಿತು' ಎಂದು ನೊದಲಾಗಿ ಎದೆದೆರೆದು ಹೊಗಳಿದ್ದಾನೆ. ಮಹಾನುಭಾವರಾದ ಪಾಲಕುರಿಕೆ ಸೋಮನಾಥರು ಇದೇ ತರದ ಅಭಿಪ್ರಾಯಗಳನ್ನು ತಮ್ಮ ಮನಸ್ಸಿನಲ್ಲಿಟ್ಟುಕೊಂಡು ಶ್ರೀ ಬಸವೋದಾಹರಣವನ್ನು ಬರೆದಿದ್ದಾರೆ.

ಉತ್-ಆ-ಹೃ ಧಾತುವಿನಿಂದ ಉದಾಹರಣ ಶಬ್ದವಾಗಿರುವುದು. ಬಸವಣ್ಣನು ಪ್ರತಿಯೊಬ್ಬಮಾನವನ ಜೀವನದ ಏಳಿಗೆಗೆ ಉದಾಹರಣವಾಗಿದ್ದಾನೆ. ಅಷ್ಟೊಂದು ಹಿಂದಿನ ಕಾಲದಲ್ಲಿಯೇ, ಧಾರ್ಮಿಕ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವಿಷಯಗಳ ಜಟಿಲ ಸಮಸ್ಯೆಗಳನ್ನು ಆ ಮಹಾನುಭಾವನು ತನ್ನ ವಿಚಾರ ಶಕ್ತಿ ಮತ್ತು ಅನುಭವಗಳ ಬಲದಿಂದ ಪರಿಹರಿಸಿರುವುದರಿಂದ ಎಲ್ಲ ವಿಷಯಕ್ಕೂ ಆ ಬಸವೇಶನ ಜೀವನವು ಉದಾಹರಣವಾಗಿದೆ ಎನ್ನಲಿಕ್ಕೆ ಯಾವ ಆತಂಕವಿರುವುದಿಲ್ಲ.

ಈ ಮಹಾಕವಿಯು ಶ್ರೀಬಸವೋದಾಹರಣದ ಪ್ರತಿಯೊಂದುಪದ್ಯದಲ್ಲಿಯೂ ತನ್ನ ಅಗಾಧವಾದ ಸಂಸ್ಕೃತ ಪಾಂಡಿತ್ಯದ ಪ್ರತಿಭೆಯನ್ನು ತೋರಿಸದೆ ಬಿಟ್ಟಿಲ್ಲ. ಪ್ರಥಮಾ ವಿಭಕ್ತಿಯಿಂದ ಸಪ್ತಮೀ ವಿಭಕ್ತಿಯವರೆಗೂ ಪದ್ಯಗಳನ್ನು ರಚಿಸಿ ಕಡೆಯದಾದ ೩೦ನೆಯ ಪದ್ಯದಲ್ಲಿ ಸಪ್ತವಿಭಕ್ತಿಗಳೂ ಸಮಾವೇಶವಾಗುವಂತೆ ಕವಿತೆಯನ್ನು ರಚಿಸಿರುವುದು ಈತನ ಮಿಗಿಲಾದ ಕಾವ್ಯಕಲಾ ಪಾಂಡಿತ್ಯಕ್ಕೆ ಒಳ್ಳೆಯ ಉದಾಹರಣವೆಂದು ಹೇಳಬಹುದು.

ಈ ಸ್ತೋತ್ರಕಾವ್ಯವು ಭಕ್ತಿರಸ ಪ್ರಧಾನವಾಗಿದೆ. ಕಥಾನಾಯಕರಾದ ಬಸವಣ್ಣನವರ ಜೀವನದ ಧ್ಯೇಯವು "ವೇದಪ್ರಿಯನಲ್ಲ, ನಾದಪ್ರಿಯನಲ್ಲ, ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ" ಎಂಬ ವಚನಾಧಾರದಿಂದ ಭಕ್ತಿಮಾರ್ಗ ಪ್ರಧಾನವಾದುದು ಎಂದು ನಾವು ತಿಳಿಯಬಹುದು. ಬಸವಣ್ಣನವರು, ಗುರುಲಿಂಗ-ಜಂಗಮಕ್ಕೆ ತಮ್ಮ ತನು-ಮನ-ಧನಗಳನ್ನು ಅರ್ಪಿಸಿದ ದಾಸೋಹ ಮೂರ್ತಿಗಳೆಂಬುದು ಪ್ರಸಿದ್ಧವಾಗಿಯೇ ಇದೆ. ಅಲ್ಲದೆ ಬಸವಣ್ಣನವರಿಗೆ ಭಕ್ತಿಭಂಡಾರಿ, ಭಕ್ತಿಯುಗದ ಆಚಾರ್ಯ ಎಂಬ ಬಿರುದುಗಳು ಪ್ರಸಿದ್ಧವಾಗಿಯೇ ಇವೆ. ಉಚಿತಜ್ಞನಾದ ಮಹಾಕವಿ ಸೋಮನಾಥನು ಬಸವಣ್ಣನವರ ಅಂತರಂಗವನ್ನೂ, ಭಕ್ತಿಯ ಹಂಬಲವನ್ನೂ ಚೆನ್ನಾಗಿ ಅರಿತವನಾದ ಕಾರಣದಿಂದಲೇ ತನ್ನ ಬಸವಪುರಾಣದಲ್ಲಿಯೂ, ಈ ಸ್ತೋತ್ರ ಗ್ರಂಥದಲ್ಲಿಯೂ ಭಕ್ತಿರಸವನ್ನು ಪ್ರಧಾನವಾಗಿ ಸ್ವೀಕರಿಸಿದ್ದಾನೆ. ಇದು ನ್ಯಾಯವಾಗಿಯೇ ಇದೆ.

ಕವಿ ಸೋಮನಾಥರು ಶ್ರೀಪ್ರಭುದೇವರು, ಚೆನ್ನಬಸವದೇವರು, ಸಿದ್ಧರಾಮ ದೇವರು ಮತ್ತು ಅಕ್ಕ ಮಹಾದೇವಿಯವರು ಇವರುಗಳ ವಿಷಯವಾಗಿಯೂ ಉದಾಹರಣ ಪದ್ಯಗಳನ್ನು ಬರೆದಿರುವಂತೆ ಪ್ರತೀತಿ ಇದೆ. ಅಮೂಲ್ಯವಾದ ಈ ಸಾಹಿತ್ಯವನ್ನು ಸಂಗ್ರಹಿಸಿ, ಸಂಸ್ಕರಿಸಿ ಪ್ರಕಟಿಸುವುದರಿಂದ ಸಾಹಿತ್ಯಕ್ಕೂ ಸಮಾಜಕ್ಕೂ ಮಹೋಪಕಾರವಾಗುತ್ತದೆ. ಈ ಗ್ರಂಥವನ್ನು ಶ್ರಮಪಟ್ಟು ಸಂಗ್ರಹಿಸಿದಂತೆಯೇ ಈಗ ಗುಪ್ತವಾಗಿರುವ ಈ ಕವಿಯ ಇತರ ಗ್ರಂಥಗಳನ್ನೂ ಸಂಗ್ರಹಿಸಿ, ಪ್ರಕಟಿಸಿ 'ಶರಣ ಸಾಹಿತ್ಯ' ಸಂಪಾದಕರು ಜನತೆಗೆ ಉಪಕಾರ ಮಾಡುವಂತೆ ಆಗಲೆಂದು ನಾವು ಮನಸಾರ ಹಾರೈಸುತ್ತೇವೆ. ಪ್ರಾಚೀನ ಗ್ರಂಥಗಳನ್ನು ಸಂಗ್ರಹಿ ಪ್ರಕಟಿಸುವುದು ಈಗಿನ ಕಾಲದಲ್ಲಿ ಅತ್ಯಂತ ಶ್ರಮ ಸಾಧ್ಯವೂ ಅಗತ್ಯವೂ ಆದ ಕಾರ್ಯವಾಗಿದೆ. ಇಂತಹ ಕಾರ್ಯವನ್ನು ಕೈಗೊಂಡವರಿಗೆ ಸಮಾಜದ ಅಭಿಮಾನಿಗಳೂ, ಶ್ರೀಮಂತರೂ ಉದಾರವಾಗಿ ಧನ ಸಹಾಯಮಾಡಿ ಈ ಜ್ಞಾನಪ್ರಚಾರಕ್ಕೆ ನೆರವಾಗಿ ತನ್ಮೂಲಕವಾಗಿ ಶಿವ ಕೃಪೆಗೆ ಹಾಗೂ ಶರಣರ ಕರುಣೆಗೆ ಪಾತ್ರರಾಗುವಂತೆ ಆಗಲೆಂಬುದು ನಮ್ಮ ಅಂತರಂಗದ ಹಿರಿಯ ಬಯಕೆಯಾಗಿದೆ.

ಮುಖ್ಯವಾಗಿ 'ಶ್ರೀ ಬಸವೋದಾಹರಣಂ' ಎಂಬ ಈ ಗ್ರಂಥವು "ಜಯತು ಬಸವರಾಜಃ ಪ್ರಾಣಲಿಂಗಾತ್ಮ ಪೂಜಃ" ಎಂದು ಮಾಲಿನೀವೃತ್ತದಿಂದ ಪ್ರಾರಂಭವಾಗಿ, "ಶ್ರೀ ಬಸವರಾಜ ಗುಣಮಣಿ ಖಚಿತಂ ಜಯತಾತ್ಸುವರ್ಣಮೇತತ್। ಸೋಮ ಸುಕವಿನಾ ರಚಿತಂ ಹೃದಯಾಭರಣಂ ಸದಾಮುದಾಹರಣಮ್" ಎಂಬ ಆರ್ಯಾವೃತ್ತದಿಂದ ಪೂರೈಸಲ್ಪಟ್ಟಿದೆ. ಇದು ಪಾರಾಯಣಕ್ಕೆ ಅರ್ಹವಾಗಿದೆ. ಮುಮುಕ್ಷುಗಳಿಗೆ ಪ್ರಿಯತಮವಾಗಿದೆ. ಸಾಹಿತಿಗಳಿಗೆ ಆನಂದದಾಯಕವಾಗಿದೆ. ಈ ಗ್ರಂಥದ ಅಧ್ಯಯನವು ಕೇವಲ ಕಾವ್ಯಾನಂದವನ್ನೇ ಅಲ್ಲದೆ, ಜನ್ಮಸಾಫಲ್ಯ ರೂಪದ ಲಿಂಗಾನಂದವನ್ನೂ ಉಂಟುಮಾಡುತ್ತದೆ. ಆದ್ದರಿಂದ ಈ ಗ್ರಂಥವು ಸರ್ವರಿಂದಲೂ ವಾಚನಾರ್ಹವಾಗಿದೆ. ಜನಜೀವನಕ್ಕೆ ಉಪಯುಕ್ತವಾಗಿದೆ. ನಮ್ಮ ಸಾಹಿತ್ಯಕ್ಕೆ ಭೂಷಣಪ್ರದವಾಗಿದೆ.

ತಾ॥ ೮-೧೨-೧೯೫೨      ಶ್ರೀ ಮಹಾದೇವ ಸ್ವಾಮಿಗಳು
ಬೆಂಗಳೂರು      ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ.



ಶ್ರೀ ಬಸವೇಶ್ವರರ ಧರ್ಮಪತ್ನಿ ನೀಲಾಂಬಿಕಾದೇವಿ ಅವರು.



ಕಲ್ಯಾಣದ ಶ್ರೀ ಬಸವೇಶ್ವರ ದೇವರು

# ಶ್ರೀಬಸವೋದಾಹರಣಮ್

## ಪಾಲ್ಕುರಿಕಿ ಶ್ರೀ ಸೋಮನಾಥ ಕವಿ ಪ್ರಣೀತಂ

### ಪ್ರಥಮಾ ವಿಭಕ್ತಿಃ

ಮಾಲಿನೀ|| ವೃ|| ಜಯತು ಬಸವರಾಜಃ ಪ್ರಾಣಲಿಂಗಾತ್ಮಪೂಜಃ
ಶರಣ ದಿವಿಜಭೂಜಃ ಸ್ಮೇರಸಂವಿತ್ಸರೋಜಃ
1ಗಣಪರಿಷದಧೀನಃ ಖ್ಯಾತದಾನಾವ2ಧಾನಃ
ಸರಸಮಹಿ3ಮಗಾನಃ ಸ್ವಾನುಭೂತ್ಯೇಕಮಾನಃ ||೧||

### ಕಳಿಕ–ಹರಿಗತಿ ರಘಟೆ

ಅಪಿಚ, ಪುರಾತನ-ನೂತನ ಶಿವಗಣ-ಪಾದೋದಕ-ಪರಿಲಸದಭಿಷೇಕಃ
ಕ್ಷಪಿತ–ವಿಸಲ್ಲವಸಲ್ಲವ-ಜಂಗಮ ಲಿಂಗ-ಸಮರ್ಚನ ನಿಚಿತವಿವೇಕಃ
ಸತತ ವಿಕಸ್ವರ-ಭಾಸ್ವರ ನಿಜ ಮುಖಮಂಡಲ ಖಂಡಿತ ರಜನೀನಾಥಃ
ಕೃತಯುಗ-ವರ್ತನ-ಕೀರ್ತನ ನಿರಸನ ನಿಪುಣ ಪವಿತ್ರಚರಿತ್ರಸನಾಥಃ
ಪ್ರಕಟಿತ ದರ್ಪಕ ದರ್ಪಕರೇಣುಪ್ರಮಥನ ನಿಶಿತ ಕರಾಂಕುಶ ಹೇ4ಲಃ
ಶುಕಮುಖಮಾನಸ ಮಾನಸಕಮಲಾಕರ ವಿಹರಣಚಣ ರಾಜಮರಾ5ಲಃ
ಸ್ವಾನುಭವಾಂಚಿತ 6ಸಂತತ ಕೂಡಲ7ಸಂಗಮದೇವ ಧ್ಯಾನಾಭಿಜ್ಞಃ
ಸೂನೃತ ಭಾಷಣ ಭೂಷಣ ವಾಣೀಸಿಂಹಾಸನ ಗಂಭೀರ ರಸಜ್ಞಃ||೨||
'ಜಯತು ಬಸವರಾಜಃ'

### ಉತ್ಕಳಿಕ

8ಕಾಕಲ ನಾರಾಚ ಧ್ವನಿಸಾ9ರಃ ಶ್ರೀವಿಶ್ರುತ ಪೇಶಲ 10ಶಾರೀರ
ವ್ಯತಿಕರ ನಾನಾಗತಿನಿಸ್ಸೀಮ11ಶ್ರುತಿಸಂಧಾಯಿಚಮತ್ಕೃತಿಭೂಮ12

---

1 ಘನ.ವ್ಯೈ. ಪಾ. ಗರ.ಆಂ.ಪಾ 2 ದಾನಃ. ವ್ಯೈ. ಓ. ಪಾ. 3 ತ.ವ್ಯೈ. ಓ.ಪಾ.
4 ಳ. 5 ಳ. ವ್ಯೈ. ಆಂ. ಪಾ.
6 ಸಂಚಿತ ಸಂಗಮದೇವ-ವ್ಯೈ. ಪಾ. ಕೂಡಲ ಸಂಗಮ.-ಆಂ. ಪಾ.
7 ಲಿ. ಆಂ. ಪಾ, 8. ಬಾಹುಳವಾರಾಘ. ವ್ಯೈ.ಪಾ. ಕಾವುಳನಾರಾಟ.ಆಂ.ಪಾ.
9. ರ. ಆಂ. ಪಾ. 10.ಶ.ವ್ಯೈ.ಪಾ. 11. ಮಃ. ವ್ಯೈ. ಪಾ. 12 ಮಃ. ವ್ಯೈ. ಪಾ.

1 ಶ್ರುತಿ2ಮುಖರಸ್ವರಸುರಸಸಮೇ3ತಃಸ್ಮೃತಿನಿಕುರುಂಬರಸಾಯನ
ಗೀ4ತಃ
ಪ್ರಮುದಿತಹೃದ್ವರ್ತನಶಿತಿಕಂಠಃಶಮುದಮುಲಾಲನಗುಣಿತೋತ್ಕಂಠಃ||
'ಬಯತುಬಸವರಾಜಃ'

## ದ್ವಿತೀಯಾವಿಭಕ್ತಿಃ

ವೇದಾಂತಾರ್ಥ ರಹಸ್ಯಭೇದ ಪಿಶುನ ವ್ಯಾಪಾರ ಪಾರಂಗತಮ್
ಪ್ರೌಢ5ಪ್ರಕ್ರಿಯ ವಾಕ್ಪ್ರಂಚ ರಚನಾಚಾತುರ್ಯಧುರ್ಯಾ6ಶಯಮ್
ದೈವಾಸ್ತಿಕ್ಯ ನಿದರ್ಶನ ಪ್ರತಿಭುವಂ ತಾಪಚ್ಛಿದಾ ಪಂಡಿತಮ್
ಭಾಂಡಾಗಾರಧುರೀಣ ಮುತ್ರಬಸವಾಮಾತ್ಯಂ ಕಿಮಾಚಕ್ಷ್ಮಹೇ? ||೪||

## ಕಳಿಕ–ದ್ವಿರದಗತಿ ರಘಟ

ಅಪಿಚ, 7ಕರತಲಯುಗಳ ವಿಹಿತ ಪುರಹರ ಯಜನಮ್ |
ಅವಹಿತ ಕರಣ ಸತತ ಪರಿಮುದಿತ ಶರಣಜನಮ್
ಆಹಿಮಕರ ಶಶಿಸರಣಿ ವಿಮುಖ ನಿಜ ಪವನಗತಿಮ್ |
ಅಹಿಪರಿಷ ದಧಿಪ ನಿಭ ವಿವಿಧ ಮಧುರಿಮ ಸು8ಮತಿಮ್
ಅತುಲ9 ಕರಿಹರಿಕನಕ ಮಣಿ10ಗಣ ಗುಣಿತ ವಿಭವಮ್
ಅತಿವಿಷಮ ಬಹುಳತರ ಭವಜಲಧಿ ಕಲಶಭವಮ್
ಅಮಲನಿಜ ಹೃದಯಕೃತ ಪರಿಚಯ ವಿದನುಭವಮ್
ಶಮಿತ ನಿರವಧಿಕ ಕಲಿವೃಜಿನ ಸಹಚರ ಭವಮ್ ||೫||
'ಬಸವಾಮಾತ್ಯಂ ಕಿಮಾಚಕ್ಷ್ಮಹೇ?

---

1 ಸ್ತು. ವ್ಯ. ಪಾ. 2 ಮಧುರ. ಪಾ. 3 ತ. 4 ತ. ಅಂ. ಪಾ.
5 ಕ್ರಮ. ವ್ಯ. ಪಾ. 6 ಶ್ರಯಂ. ವ್ಯ. ಪಾ.
7 ಕರಕಮಲ. ಪಾ. 8 ಗ_ವ್ಯ. ಪಾ.
9 ಹರಿ-ವ್ಯ. ಪಾ. 10 ಗುಣಿತಗಣ-ವ್ಯ. ಪಾ.

### ಉತ್ಕಳಿಕ

ನಿರತಿಶಯ ಜನದುರಿತ ನಿರಸನ ನಿಪುಣ ಚರಿ1ತಂ
ಘನವಿಷಯ ರಸವಿಮುಖ ಸನಕ ಶುಕ ಜನಕ ಮುಖ
ಸಕಲಯಮಿ ಜನವಿಮಲ ವಿಕಸಿತ ಹೃದಯ ಕಮಲ
ಪರಿಕಲನ ಮಧುಕರಂ ಶರಣಜನ ಶಿವಕರಮ್ ||೬||
'ಬಸವಾಮಾತ್ಯಂಕಿಮಾಚಕ್ಷ್ಮಹೇ ?'

### ತೃತೀಯಾವಿಭಕ್ತಿಃ

ಆಸ್ಥಾನೇ ಶಿವನಾಗಸಂಯಮಿ ಕರದ್ವಂದ್ವಾಂಗುಳಿಶ್ರೇಣಿಕಾ
ಲೀಲಾಲಾಲನಮಂಥನಾದಜನಯತ್ ಯಃ ಕ್ಷೀರಧಾರಾವ2ಳಿಮ್
ತೇನಾತ್ಯದ್ಭುತಕರ್ಮಕರ್ಮಠ ಮಹಾ ಮಹಾತ್ಮ್ಯೈ ವರ್ಧಿಷ್ಣುನಾ
ಭಾಂಡಾಗಾರ ಧುರಂಧರೇಣ ಬಸವಾಮಾತ್ಯೇನ ಕಃ ಸ್ಪರ್ಧತೇ? ||೭||

### ಕಳಿಕ–ತುರಗವಲ್ಗನ ರಘುಟ

ಅಪಿಚ, ನಿಗನುಸಾರ ಭೂತ ವೀರಶೈವ ದೀಕ್ಷಿತೇನ
ತಪನ ಶತಸಹಸ್ರ 3ಸದೃಶ ದೇಹ ದೀಪ್ತಿ ಲಕ್ಷಿತೇನ
ಖಂಡಿತ ಪ್ರಸೂನ ವಿಶಿಖ ಚಾಪ ದಂಡ ಲಸ್ತಕೇನ
ಮಂಡಿತಾನುಭಾವ ಶರಣ ಚರಣ ಕಲಿತ ಮಸ್ತಕೇನ
ವಿದಳಿತ ಪ್ರಚಂಡ ವಿವಿಧ ವಿಷಮ ವಿಷಯ ಗರ್ಜಿತೇನ
ಹೃದಯ ವಿವರ4 ನಿವಸನ ಪ್ರಗಾಢ ಲೌಲ್ಯವರ್ಜಿತೇನ
ನೀಲಗಳ ವಿಶಿಷ್ಟ ಭಕ್ತಭವನ ಪುಷ್ಯದಿಂದಿರೇಣ
5ಭಾಲನಯನ ವಿಮಲ ಹೃದಯ ಕಮಲಮಧ್ಯಮಂದಿರೇಣ ||೮||
'ಬಸವಾಮಾತ್ಯೇನ ಕಃಸ್ಪರ್ಧತೇ?'

---

1 ತ. ಅಂ. ಪಾ. 2ಳಿ–ವ್ಯೆ.ಪಾ. 3 ಕೋಟಿ–ವ್ಯೆ.ಪಾ.
4 ಧಿಷಣ.–ವ್ಯೆ. ಅಂ. ಪಾ. 5 ಫಾ. ವ್ಯೆ. ಪಾ.

## ಉತ್ಕಳಿಕ

ಯಾವನಾಳರಾಶಿ[1]ನಿಹಿತ ಭೂವಿನುತ ಕಟಾಕ್ಷನುಹಿತ
ಶಕ್ತಿವೈಭವಾಭಿಜಾತ ಮೌಕ್ತಿಕ ಪ್ರದಾನ[2]ನೀತ
ಸಾಂಗ ಭಕ್ತ ವೃಷಭ ನಿತ್ಯ ರಂಗವ[3]ಲ್ಲಿ ನಿಯಮ ಕೃತ್ಯ
ದೃಷ್ಟ ಸಾದ್ಭುತ ಕ್ರಮೇಣ ದುಷ್ಟದಳನ ವಿಕ್ರಮೇಣ ||೯||
'ಬಸವಾಮಾತ್ಯೇನ ಕಃಸ್ಪರ್ಧತೇ?'

## ಚತುರ್ಥೀ ವಿಭಕ್ತಿಃ

ಶಾ|| ವೇದಾಂತೋದಿತ ವೀರಶೈವ ಸಮಯಾಚಾರ ವ್ರತಪ್ರಕ್ರಿಯಾ
ಚರ್ಯಾದೇಶಿಕ ಸಾರ್ವಭೌಮ ಮಹಿಮಭ್ರಾಜಿಷ್ಣ ವೇಜಿಷ್ಣ ವೇ
ಭಾಂಡಾಗಾರಧುರಂಧರಾಯ ಬಸವಾಮಾತ್ಯಾಯಚೇತಸ್ಸದಾ
ಜಾಗ್ರತ್ಕೂಡಲಸಂಗಮೇಶ್ವರ ಮಹಾದೇವಾಯತಸ್ಮೈನಮಃ||೧೦||

## ಕಳಿಕ–ಹರಿಗತಿ ರಘಟ

ಅಪಿಚ,ಗೌತಮ ಕಣಾದ ಕುಂಭಜ ಚ್ಯವನಮುಖ್ಯಮುನಿ।ಚಿತ್ತಸದ್ಮನೇ
ತಪನವನ್ಹಿ ಹಿಮಭಾನುಲೋಚನ ತ್ರಿಪುರವೈರಿಗಣ ಭಾವಿತಾತ್ಮನೇ
ಕರತಲಸ್ಥ ನಿಖಿಲಾಂಡಮಂಡಲ[5] ಪ್ರಕಟಕಂದುಕ ಸದಾ ವಿಹಾರಿಣೇ
ಕರಟದೈತ್ಯಘನತುಂಗ ಮಸ್ತಕಕ್ಷರಿತಮೌಕ್ತಿಕ ನಿಕಾಯಹಾರಿಣೇ
ಕುಸುಮ ಬಾಣಶಿತಬಾಣಸಂ[6]ಹತಿ ಗ್ರಸನಧೀರ ಗುಣಸಾರಶೋಚಿಷೇ
ವಸುಮತೀ[7]ಪ್ರಮುಖಭೂತ[8]ಚೇತನಪ್ರದದಯಾಮಯಕಟಾಕ್ಷರೋಚಿಷೇ
ವಿತತಪಾತಕ ಸಮೂಹ ಸಾನು ಮದ್ವಿತತಿ ನಿರ್ದಳನವಜ್ರಬಾಹವೇ
ಶ್ರುತಿಸಮುತ್ಕರಸದಾವಿರೋಧಕೃತ್ಸಮಯಬೌದ್ಧಮುಖಚಂದ್ರರಾಹವೇ
'ಮಹಾದೇವಾಯ ತಸ್ಮೈನಮಃ' ||೧೧||

---

1 ವಿ. ಮೈ. ಪಾ. 2 ನಿಹಿತ. ಮೈ. ಪಾ. 3 ಲ್ಯ–ಮೈ. ಪಾ.
4 ಲಬ್ಧ–ಆಂ. ಪಾ. ವಕ್ತ್ರ. ಆಂ. ಪಾ. ಸತ್ಯಾತ್ಮನೇ.ಮೈ. ಪಾ.
5 ಲಿಕನಕಕಂದುದುಃಕ. ವದ್ವಿ. ಮೈ. ಆಂ. ಪಾ
6 ಪೃ–ಮೈ. ಪಾ. ಆಂ. ಪಾ. 7 ಮುಖ ಮೈ.ಪಾ. 8 ಚೇತನಾಯುತ ಮೈ.ಪಾ.

## ಉತ್ಕಳಿಕ

ರುಚಿರರತ್ನ ಮಹನೀಯಹಾಟಕ[1]ಪ್ರಚುರರೂಪಜನಸತ್ತ್ವ[2]ಘೋಟಕ
ತ್ವರಿತಧೂತ ಸೃಣಿಪಾತಧಾರಣ ಕ್ಷರಿತದಾನಜಲ ಗಂಧವಾರಣ
ಪ್ರಥಿತವಸ್ತುಪರಿಷನ್ನಿರಂತರ [3]ಪ್ರದನುಹಾನುಹಿನುಕಾರಣಾಂತರ
ಸ್ಮಿತಪರಿಸ್ಫುರಿತ ಭಕ್ತಚೇತಸೇಸ್ತುತಿನಚೋಮುದಿತವನ್ನಿರೇತಸೇ॥೧೨॥
'ಮಹಾದೇವಾಯತಸ್ಮೈ ನಮಃ'॥

## ಪಂಚಮೀವಿಭಕ್ತಿಃ

ಶಾ॥ ಚೇತಃ ಕೀಲಿತ ಸಂಗಮೇಶ್ವರ-ಮಹಾದೇವಾಲಿಕ ಪ್ರಸ್ಫುರ
ಜ್ವಾಲಾಜಾಲಜಟಾಲ ವನ್ಹಿಶಲಭಾಕಾರ ಪ್ರಸೂನಾಂಬಕಾತ್
ಭಾಂಡಾಗಾರಧುರಂಧರಾತ್ ಬಸವಾನ್ಮಾತ್ಯಾ[4]ದಮಾತ್ಯಾವಳೀ
ಚೂಡಾಸ್ಪೃಷ್ಟಪದಾರವಿಂದಯುಗಳಾತ್ನೈವಾಪರಂ ದೈವತಮ್॥೧೩॥

## ಕಳಿಕ ಹರಿಗತಿ ರಘಟೆ

ಆಪಿಚ,ಜಗತ್ತ್ರಯ ಕರ್ಣಸುಧಾರಸಕುಲ್ಯಾಂಚಿತಸೂನೃತ ಜಲ್ಪಾಕಾತ್
ಕುಪಿತಾಂತರ್ಗತರಿಪುಷಡ್ವರ್ಗ[5]ಮಹೋತ್ಕಟಮಸ್ತಕತಟಕುಟ್ಟಾಕಾತ್
ಪರವನಿತಾಜನ ಭಾಸುರತರಮುಖಮಂಡಲ ವೀಕ್ಷಣವಿಧಿಜಾತ್ಯಂಧಾತ್
ನಿರತಿಶಯಾನುಗ್ರಹ ಶಿತಖಡ್ಗಲತಾಪರಿಲೂನಪುನರ್ಭವಬಂಧಾತ್
ಕನ್ನದ[6]ಬ್ರಹ್ಮಾರ್ಯಕರುಣಾದುಗ್ಧಾರ್ಣವಸಂವರ್ಧನರಾಕಾಚಂದ್ರಾತ್
[7]ಕಿನ್ನರಿಬ್ರಹ್ಮಾರ್ಯ ಪುರಹರಗೋಷ್ಠೀ ಸಲ್ಲಪನಾಕರ್ಣನನಿಸ್ತಂದ್ರಾತ್
ಲಾಲಿತಸಕಲಪುರಾತನ ಗಣವಾಙ್ಮಣಿ ಮುಕುರಪ್ರತಿಬಿಂಬಿತರೂಪಾತ್
ಲೀಲಾಲಾಲಸ ರಸಮಣಿಚಂಚಲ ನಯನಾಂಚಲಶಿತವಿಶಿಖದುರಾಪಾತ್
'ನೈವಾಪರಂದೈವತಮ್' ॥೧೪॥

---

1 ಪ್ರಚಯ. ವ್ಯೈ. ಅಂ. ಪಾ. 2 ತತ್ತ್ವ ವ್ಯೈ. ಪಾ.
3 ಪ್ರಥಮಶಾಲಿ ಭವನಾಂ ಕಿಣಾಂತರ-ವ್ಯೈ.ಪಾ. 4 ತ್ಸಪರ್ವಾವಳೀ- ಅಂ.ವ್ಯೈ.ಪಾ.
5 ಮಂದರ.ವ್ಯೈ. ಪಾ. 6 ಬ್ರಂಹಯ-ಅಂ ಪಾ. ಬೊಮ್ಮಯ_ವ್ಯೈ.
7 ಕಿನ್ನರಿಬಂಹಯ-ಅಂ. ಪಾ. ಬೊಮ್ಮಯ.ವ್ಯೈ. ಪಾ.

### ಉತ್ಕಳಿತ

ಆಶಾಜಲ ಸುತಶಿಖರಿ ಸಮೂಹ ಕ್ಲೇಶತಿಮಿಂಗಿಲಮಿತ್ರಗ್ರಾಹ
ಸ್ವಕಳತ್ರ ಸಮುತ್ಕರ ನವಫೇನ ಪ್ರಕಟಿತ ಬಾಂಧವಮಂಡಲಮೀನ
ವ್ಯಾಧಿಪರಿಷದುತ್ತುಂಗತರಂಗ ಕ್ರೋಧವಿಜೃಂಭಣ ಘೋರಭುಜಂಗ
ಸ್ಫುರದುರುತರಭವಜಲಧಿವಹಿತ್ರಾದ್ದುರಿತಲತಾಚಯಲವನಲವಿತ್ರಾತ್
'ನೈವಾ-ಪರಂದೈವತಮ್' ||೧೫||

### ಷಷ್ಠೀ ವಿಭಕ್ತಿಃ

ಚಿದ್ವ್ಯೋಮ ಸ್ಮಯಮಾನ ಶೀತಕಿರಣೋದ್ಯೋತತ್ಸುಧಾ ಮಾಧುರೀ
ನಿರ್ವೃತ್ತಿಸ್ನಪನ ಪ್ರಮೋದ ಭರಿತ ಶ್ರೀ ನೀಲಕಂಠಾತ್ಮನಃ
ಉನ್ಮೀಲದ್ಗುಣರತ್ನ ರೋಹಣ ಮಹಾಶೈಲಸ್ಯ ತಸ್ಯ ಪ್ರಭೋಃ
ಭಾಂಡಾಗಾರ ಧುರಂಧರಸ್ಯ ಬಸವಾಮಾತ್ಯಸ್ಯ ದಾಸ್ಯಂಭಜೇ ||೧೬||

### ಕಳಿಕ-ಹರಿಗತಿ ರಘಟ

ಅಪಿಚ, ಶರನೀಹಾರ ಹಾರಮಲಯಜಭಸಿತ ಸಿತದಿವ್ಯದೇಹಸ್ಯ
ಕುಪಥ[1]ಚರದುರ್ಭಾವ ಭಾವ ಭವಮದ ವಿಹೃತಿಹೃದಿ[2]ಸುಸನ್ನಾಹಸ್ಯ
ಸಂಗಮೇಶ್ವರ ನಿಹಿತ ಹಿತಮಧುರ ಸಂಗೀತ ಗೀತಾನುಭಾವಸ್ಯ
ಜಂಗಮ ಮನಸ್ಸಂಗ ಸಂಗತೇಹಾದಾವ ದಾವ ಪ್ರಭಾವಸ್ಯ
ಭಕ್ತಿಮಹಿಳಾ[3] ಶ್ಲೇಷಜನಿತಮೇದುರ ವಿಪುಲಪುಲಕಸಂಯೋಗಸ್ಯ
ಮುಕ್ತಿಸೌಖ್ಯಾಧಾನದಾನವಿದ್ಯಾನಿರತ ರತಮಹೋದ್ಯೋಗಸ್ಯ
ಪರಿಚಿತಸುಧಾಸಾರಸಾರ ಮಧುರಿಮನಿಕೃತಿಕೃತಿಚಣವಚಸ್ಕಸ್ಯ
ಧರಣಿದಿಗ್ವಿಯ ದತಲ ತಲ ನಿಬಿಡ ಶಶಿಕರನಿಕರ ನಿಭಯಶಸ್ಕಸ್ಯ
'ಬಸವಾಮಾತ್ಯಸ್ಯ ದಾಸ್ಯಂಭಜೇ' ||೧೭||

---

1 ಪರ. ಮ್ಮೆ ಪಾ. 2 ಶಿ. ಮ್ಮೆ. ಪಾ. 3 ಮೋದಮೇದುರ ಮ್ಮೆ. ಪಾ.

**ಉತ್ಕಳಿಕ-ದ್ವಿರದಗತಿ ರಘಟೆ**

ನಿಟಲಲೋಚನ ಭಕ್ತವಾತ್ಸಲ್ಯ ಕಲ್ಯಾಣ
ಕಟಕ ನೀತಾವಾಸ ನಿಸ್ಸೀಮ ಕಲ್ಯಾಣ
ಗೋಚರಾಂಚಿತ ವಪುರ್ವಿಸ್ಫೂರ್ತಿ ಮಡಿವಾಳ
ಮಾಚಯ ಪ್ರಭು ದೀರ್ಘನಯನಾಂಚಿತೋ[1]ತ್ತಾಳ
ಕೋಪಪ್ರಸಾದ ಭಾಜನತಾವಿಧಾಕ್ರಾಂತ
ದೀಪಿತಪ್ರಥಮಾನಭಕ್ತಿ ವಿನಯಾತ್ಯಂತ
ಭಾರವೈದಿಕ ಸುವಿಶ್ರುತ ಶಿವಾಚಾರಸ್ಯ
ಸಾರಜಂಗಮಸೂಕ್ತಿ ಮಣಿಕರ್ಣಪೂರಸ್ಯ ||೧೮||

'ಬಸವಾಮಾತ್ಯಸ್ಯದಾಸ್ಯಂಭಜೆ'

**ಸಪ್ತಮೀವಿಭಕ್ತಿಃ**

ಶಾ|| ವಿ|| ಓಂಕಾರಾಂಕುರ ವೇದಪಲ್ಲವಲಸತ್ಪಂಚಾಕ್ಷರೀ ಮಂಜರೀ
ತತ್ತ್ವಾಮೋದ ನಿತಾಂತಲುಬ್ಧ ಶರಣಾನೀ[2]ಕೇದ್ಧ ಪುಷ್ಪಂಧಯಾ
ಯಾಽಸೌನಾದಲತಾ ತದೀಯ ಸುಷುಮಾಗಾಮಾಭಿರಾಮಸ್ಥಲೇ
ತಸ್ಮಿನ್ ಶ್ರೀಬಸವಾಹ್ವಯೇ ಗುಣನಿಧೌ ಕಿಂವಾ ನ ಲೋಕೋತ್ತರಂ?

**ಕಳಿಕ-ಮಧುರಗತಿ ರಘಟೆ**

ಅಪಿಚಾ,ಧಾರ ಸುರಂಗ ಜ್ಞಾತರಿ,
[3]ಸುಪಥಪಥಿಕ ಚಿತ್ಸುಖಸಂಧಾತರಿ,
ವರ್ಗಚತುಷ್ಟಯ ದಾಪನ ಶೀಲಿನಿ,
ದುರ್ಗತಿ ನಿರಸನ ಕರುಣಾಶಾಲಿನಿ,
ಶರಣಪದಾಬ್ಜಪರಾಗಲಲಾಮನಿ,
ದುರಿತನಿರಾಸ ಧುರಂಧರಭೂಮನಿ,

---

1 ತ್ಕೀಳ. ಅಂ. ಪಾ. 2 ಕೋದ್ಧ-ಅಂ. ಪಾಂ. 3 ಹ. ಪ್ರೈ. ಪಾ.

ವೇದವಿರುದ್ಧಚಾರ ಪರಿದ್ವಿಷಿ,
ನಾದಸುಧಾ ಪ್ರೀಣಿತಪುರವಿದ್ವಿಷಿ ||೨೦||

**ಉತ್ಕಳಿಕ**

ಸುರಗಿರಿ ಮಂದರನಿರುಪಮ ಕಂದರ
ಘನ1ತರ ಚಂದನ ವನ2ಚಯ ನಂದನ
ಮಹಿಳಾ ಸಹಚರ ವಿಹರತ ಖೇಚರ
ಲಾಲಿತ ನಾಮನಿ ಕೀಲಿತ ಸಾಮನಿ ||೨೧||

'ಗುಣನಿಧೌ ಕಿಂವಾನ ಲೋಕೋತ್ತರಂ ?'

**ಸಂಭೋಧನ ಪ್ರಥಮಾವಿಭಕ್ತಿಃ**

ಶಾ|| ಮೂಲಾಧಾರ ವಿಕಸ್ವರಾಂಬುಜವನೀಮಧ್ಯಸ್ಫುರದ್ವೀಚಿಕಾ
ಯಾತಾಯಾತ ವಿನೋದಪೇಶಲಮತೇ! ಚಿದ್ವ್ಯೋಮಶೀತದ್ಯುತೇ!
ಸಂಸಾರಾರ್ಣವ ಕರ್ಣಧಾರ! ಕೃಪಯಾ ಮಾಂ ಪಾಲಯ ಪ್ರತ್ಯಹಂ
ಭಾಂಡಾಗಾರ ಧುರಂಧರೇಶ! ಬಸವಾಮಾತ್ಯೇಶಚೂಡಾಮಣೇ! ||೨೨||

ಅಪಿಚ,ಪಾಲಿತ ವೀರಶೈವವ್ರತಾಚಾರ!
ಕೃಪಣಜನರಕ್ಷಣ ಕೃತಕರಣವ್ಯಾಪಾರ!
ಸಿತಯಶಃಕರ್ಪೂರ ವಾಸಿತಬ್ರಹ್ಮಾಂಡ!
ಮಿತಿರಹಿತಕಿಲ್ಬಿಷಾಂಬುಜಷಂಡವೇತಂಡ!
ಭುಜಗವರಸುರ ಗರುಡ 1ಖಚರ ಕಿನ್ನರಸಾಧ್ಯ!
ನಿಜಗುಣಶ್ರವಣತೋಷಿತ ಪಂಡಿತಾರಾಧ್ಯ!
ಶತಮುಖತರುಶ್ಲ್ಯೀತ ಗಣಪರಿಷದುತ್ಕಂಠ!
ತತವಿತತಘನ ಸುಷಿರಕೀರ್ತಿತಶ್ರೀಕಂಠ! ||೨೩||

---

1 ಹರಿ-ವ್ಯ. ಪಾ. 2 ಮಯ-ವ್ಯ. ಪಾ.
1 ಖೇ-ವ್ಯ. ಪಾ.

ಶುಕಮುಖಮುನೋಗಮ್ಯ! ವಿಕಚ1ಗುಣ ಗಣತಾನ್ಯ!
2ಅಲ್ಲಮುಪ್ರಭು ಸತ್ಯ ಸಲ್ಲಪನ ಸಾಂಗತ್ಯ!
ಸಾಧಿತ ಸ್ವಾತ್ಮಾವ ಬೋಧ ನಿಜಸದ್ಭಾವ!
ಶಿವತತ್ತ್ವವಿಸ್ತಾರ! ಭಕ್ತಿಪಥ ನಿಸ್ತಾರ! ॥೨೪॥
'ಬಸವಾಮಾತ್ಯೇಶ ಚೂಡಾಮಣೇ!'

**ಸಾರ್ವವಿಭಕ್ತಿಕಮ್**

ಯಸ್ಸಂಗೀತನಿಧಿಃ,ಯಮಾಹುರಭವಂ, ಯೇನಾರ್ಜಿತಂಸೂನೃತಮ್
ಯಸ್ಮೈಲಸ್ವಸ್ತಿ,ಯತಸ್ತದೀಯಮುದಭೂತ್ ಯದ್ವೀರಶೈವವ್ರತಮ್
ಯಸ್ಯಾಪಾಂಗಸಹೋದರೀಚ ಕರುಣಾ, ಯಸ್ಮಿನ್ಮಹತ್ತ್ವಾಧಿಕಮ್,
ಸತ್ವಂತ್ರೀಣಿ ಜಂಗತಿ ಪಾಹಿ ಬಸವಾಮಾತ್ಯೇಶ ಚೂಡಾಮಣೇ! ॥೨೫॥

ಆರ್ಯಾವೃತ್ತ॥ ಶ್ರೀ ಬಸವರಾಜ ಗುಣಮಣಿ
ಖಚಿತಂ ಜಯತಾತ್ ಸುವರ್ಣಮೇತತ್
ಸೋಮಸುಕವಿ ನಾ ರಚಿತಂ
ಹೃದಯಾಭರಣಮ್ ಸ3ದಾಮುದಾಹರಣಮ್ ॥೨೬॥

**ಇತಿ ಪಾಲ್ಕುರಿಕಿ ಸೋಮನಾಥ ಕವಿ ಪ್ರಣೀತಂ**

**ಶ್ರೀ ಬಸವೋದಾಹರಣಂ ಸಮಾಪ್ತಂ**

॥ ಮಂಗಳಂ ॥

---

1. ಕರುಣಾಕಾವ್ಯ-ನ್ಯೆ. 2- ದ. ಆಂ. ಪಾ 3 ತಾ. ಪಾ.

॥ಶ್ರೀ ಗುರು ಬಸವಲಿಂಗಾಯ ನಮಃ ॥

## ಮಹಾಕವಿ ಪಾಲ್ಕುರಿಕಿ ಸೋಮನಾಥಾರಾಧ್ಯ ಪ್ರಣೀತ

# ಶ್ರೀ ಬಸವೋದಾಹರಣಮ್

ಮಹಾ ಕವಿಯಾದ ಪಾಲ್ಕುರಿಕಿ ಶ್ರೀ ಸೋಮೇಶ್ವರನೆಂಬ ಮಹಾತ್ಮನು ಸಂಸ್ಕೃತಾದಿ ಭಾಷೆಗಳಲ್ಲಿ ಪಂಡಿತನಾದುದರಿಂದ, ತಾನು ಇತರ ಭಾಷೆಗಳಲ್ಲಿ ರಚಿಸಿರುವಂತೆ, ಸಂಸ್ಕೃತಾಭಿಜ್ಞರ ಮನಸೆಳೆಯಲೋಸುಗವಾಗಿ ಸಂಸ್ಕೃತದಲ್ಲಿ ಮನೋಹರ ಕಾವ್ಯವನ್ನು ವಿರಚಿಸಲುಜ್ಜುಗಿಸಿ, ಬೌದ್ಧಾದಿ ಪರಮತ ಪ್ರಾಬಲ್ಯದಿಂದ ಲೋಕದಲ್ಲಿ ಶಿವತತ್ತ್ವ ಪ್ರಸಾರವು ಹ್ರಾಸವಾಗುತ್ತಿದ್ದ ಸಮಯದಲ್ಲಿ, ಪರಮಕರುಣಾಶಾಲಿಯಾದ ಪರಮೇಶ್ವರನ ಅನುಗ್ರಹದಿಂದ ಪರಮಪಾವನ ಶಿವತತ್ತ್ವ-ಶಿವಪೂಜಾ-ಶಿವಧ್ಯಾನಾದಿ-ಶಿವಧರ್ಮೋದ್ಧಾರಕ್ಕಾಗಿಯೇ "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ!" ಎಂಬ ಗೀತಾವಚನಾನುಸಾರ ನಂದೀಶ್ವರಾವತಾರನಾಗಿ ಭೂಮಿಯಲ್ಲಿ ಅವತರಿಸಿ, ಖಿಲವಾಗುತ್ತಿದ್ದ ಶಿವಧರ್ಮವನ್ನುದ್ಧರಿಸಿದ ಕಾರಣ, ಬಸವೇಶ್ವರನ ಕಡೆಗೆ ಆಕರ್ಷಿಸಿದ ಚಿತ್ತನಾದ ನಿಮಿತ್ತ, ಲೋಕವಿಲಕ್ಷಣಗಳೂ ಭಕ್ತಾನುಗ್ರಹ ಪ್ರದಗಳೂ ಆದ ಆ ಮಹಾತ್ಮನ ಪುಣ್ಯಕೃತ್ಯಗಳನ್ನು ವಿವರಿಸುವ ಬಸವೋದಾಹರಣಮ್ ಎಂಬ ಗ್ರಂಥವನ್ನು ರಚಿಸುವ ಮುನ್ನ, ವಿಘ್ನವಿಲ್ಲದೆ ಪರಿಸಮಾಪ್ತಿಯನ್ನು ಬಯಸಿ "ಕಾವ್ಯಂಯಶಸೇ ಅರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ" ಎಂಬಂತೆ ತನ್ನ ಕೀರ್ತಿಪ್ರಸರಣಕ್ಕಾಗಿಯೂ, ಪಾಠಕರ ಬೋಧಕ್ಕಾಗಿಯೂ, ಅನುಸ್ಯೂತವಾಗಿ ಶಿಷ್ಟಾಚಾರದಿಂದ ಬಂದಿರುವ "ಮಂಗಳಾದೀನಿ ಮಂಗಳಮಧ್ಯಾನಿ ಮಂಗಳಾಂತಾನಿ" ಎಂಬ ಮಹಾಭಾಷ್ಯ ಪ್ರಮಾಣ ವಚನದಂತೆ, ಕವಿಯು ಮೊದಲು ಪ್ರಥಮಾವಿಭಕ್ತಿಯಲ್ಲಿ ಮಂಜುಳಪದಪುಂಜರಂಚಿತವಾದ ಮಾಲಿನೀವೃತ್ತದಿಂದ ಛಂದೋಬದ್ಧವಾದ ಶೈಲಿಯಲ್ಲಿ—

## ಪ್ರಥಮಾವಿಭಕ್ತಿಃ

ಮಾಲಿನೀ|| ಜಯತು ಬಸವರಾಜಃ ಪ್ರಾಣಲಿಂಗಾತ್ಮಪೂಜಃ
ಶರಣ ದಿವಿಜಭೂಜಃ ಸ್ಮೇರಸಂವಿತ್ಸರೋಜಃ
ಗಣಪರಿಷದಧೀನಃ ಖ್ಯಾತದಾನಾವಧಾನಃ
ಸರಸಮಹಿಮಗಾನಃ ಸ್ವಾನುಭೂತ್ಯೇಕಮಾನಃ ||೧ ||

ಎಂದು ಮಂಗಳ ಪದ್ಯವನ್ನು ನೀರದ ನಿನಾದಸಮ ಸುಮಧುರ ಮನೋಹರರವಪೂರಿತ ಕಂಠದಿಂದ ಹಾಡಿರುತ್ತಾನೆ. ಪ್ರಕೃತದಲ್ಲಿ ಆ ಪವಿತ್ರ ಕೃತಿಯ ಭಾವವು ಸಕಲ ಕರ್ಣಾಟಕ ಭಾವುಕ ಜನಸ್ತೋಮಕ್ಕೆ ತಿಳಿಯಲೆಂಬ ಮಹೋದ್ದೇಶದಿಂದ, ಕನ್ನಡದಲ್ಲಿ ಪ್ರತಿಪದ ಟಿಪ್ಪಣಿಯನ್ನು ಬರೆಯಲಾಗಿದೆ.

ಟೀಕಾ:—ಪ್ರಾಣಲಿಂಗ–ಪ್ರಾಣಲಿಂಗವೆಂಬ, ಆತ್ಮಪೂಜಃ–ಆತ್ಮಪೂಜೆಯಲ್ಲಿ ತೊಡಗಿದವನಾಗಿ ಸ್ವಾತ್ಮಾನುಸಂಧಾನದಲ್ಲಿ ನಿರತನಾದವನು, ಶರಣ-ಶಿವಶರಣ ಜನನಿಕರಕ್ಕೆ, ದಿವಿಜಭೂಜಃ–ಇಷ್ಟಾರ್ಥವನ್ನೀಯುವ ದೇವಲೋಕದಲ್ಲಿನ ಕಲ್ಪವೃಕ್ಷದಂತಿರುವವನು, ಸ್ಮೇರ-ವಿಕಸಿತವಾದ ಸಂವಿತ್-ಸುಜ್ಞಾನಕ್ಕೆ ಅರ್ಥಾತ್ ಸಮ್ಯಗ್ ಜ್ಞಾನಕ್ಕೆ, ಸರೋಜಃ-ಕಮಲ ರೂಪನಾದಂಥ, ಗಣ ಪರಿಷತ್-ಪ್ರಮಥಗಣರೆಂಬ ಸಮಿತಿಗೆ, ಅಧೀನಃ-ವಶವಾದ ಅಂತಃಕರಣವುಳ್ಳ, ಖ್ಯಾತ-ಪ್ರಸಿದ್ಧವಾದ, ದಾನ–ಸ್ವಸಂಪತ್ತನ್ನು ಯೋಗ್ಯರಿಗೆ ಕೊಟ್ಟು ತೃಪ್ತಿಪಡಿಸುವುದರಲ್ಲಿ, ಅವಧಾನಃ-ಎಚ್ಚರಿಕೆಯುಳ್ಳ, ಸರಸ–ರಸಪೂರಿತವಾದ ಮಹಿಮ–ಮಹಿಮೆಯ ಎಂದರೆ ಹಿರಿಮೆಯ, ಗಾನಃ–ಗಾಯನವುಳ್ಳಂಥ, ಸ್ವ–ತನ್ನ, ಅನುಭೂತಿ–ಅನುಭವವೇ, ಏಕಮಾನಃ-ಮುಖ್ಯ ಪ್ರಮಾಣವಾಗಿ ಉಳ್ಳ, ಬಸವರಾಜಃ-ನಂದೀಕೇಶ್ವರನ ಅವತಾರ ಪುರುಷನಾಗಿ ಶಿವಧರ್ಮ ಪರಿಪಾಲನೆಗೋಸ್ಕರ ರಾಜತ್ವ (ತನ)ವನ್ನು ಹೃತ್ಪೂರ್ವಕವಾಗಿಯೇ ಪರಿಗ್ರಹಿಸಿದ ಶ್ರೀ ಬಸವೇಶ್ವರನು, ಜಯತು–ಸರ್ವೋತ್ಕೃಷ್ಟನಾಗಿ ಆಚಂದ್ರಾರ್ಕವಾಗಿ ಜಗದಲ್ಲಿ ಬೆಳಗಲಿ ಎಂದು ಸುಪ್ರಭಾತಗೀತವನ್ನು ರಚಿಸಿದ್ದಾನೆ.

ಇಲ್ಲಿ 'ಜಯತು' ಎಂಬ ಕ್ರಿಯಾಪದವು ಧಾತು ಪಾಠದಲ್ಲಿ ಹೇಳಿರುವ ಜಿ–ಜಯೆ ಎಂಬ ಮೂಲಧಾತುವಿನಿಂದ ನಿಷ್ಪನ್ನವಾದ, ಪ್ರಾರ್ಥನೆಯನ್ನು ಬೋಧಿಸುವ ಲೋಟ್ ಎಂಬ ಲಕಾರದ ರೂಪವಾಗಿದೆ. ಆದ್ದರಿಂದ ನಮಸ್ಕಾರ ಆಶೀರ್ವಾದ ಮತ್ತು ವಸ್ತುನಿರ್ದೇಶರೂಪಗಳಾದ ಮೂರು ತೆರನಾದ ಮಂಗಳಗಳಲ್ಲಿ ಆಶೀರ್ವಾದರೂಪ ಮಂಗಳ ಪದ್ಯವಾಗಿದೆ. ಕವಿಗಳಲ್ಲಿ ಪ್ರಾಚೀನ ಕಾಲದಿಂದ ಶಿಷ್ಟಾಚಾರವಾಗಿ ಬಂದಿರುವುದೂ, ದುರಿತ ಕರ್ಮವನ್ನು ಕಣ್ಮರೆಮಾಡುವುದೂ ಆದ: ಇಷ್ಟದೇವತಾಸ್ತುತಿಗೆ 'ಮಂಗಳ' ಎಂದು ಕರೆಯುವ ಸಂಪ್ರದಾಯವು ಭಾರತದಲ್ಲಿ ಬಳೆದುಬಂದಿದೆ. ಆದಕಾರಣ ಕವಿಯು ಜಯತು ಎಂಬ ಮಂಗಳ ಗೀತವನ್ನು ಮುಕ್ತ ಕಂಠದಿಂದ ಸುಶ್ರಾವ್ಯವಾಗಿ ಹಾಡಿರುತ್ತಾನೆ. ಈ ಪದ್ಯವು ಛಂದಶ್ಶಾಸ್ತ್ರದಲ್ಲಿ ಉಕ್ತವಾಗಿರುವ ಮಾಲಿನೀವೃತ್ತದಲ್ಲಿ ರಚಿತವಾಗಿದೆ. ಆ ವೃತ್ತದ ಲಕ್ಷಣವು "ನನಮಯಯಯುತೇಯಂ ಮಾಲಿನೀ ಭೋಗಿಲೋಕೈಃ" ಎಂದಿದೆ. ಇದರಲ್ಲಿ ಪಾದಕ್ಕೆ ೧೫ ಅಕ್ಷರಗಳಿರುತ್ತವೆ. ಅದರ ಸ್ವರೂಪವನ್ನು ಇಲ್ಲಿ ಸಾಂಗೋಪಾಂಗವಾಗಿ ವಿವರಿಸಲು ಅವಕಾಶವಿಲ್ಲದ ಪ್ರಯುಕ್ತ ತದಭಿಜ್ಞರಿಂದ ತಿಳಿಯಲು ಅರ್ಹವಾಗಿದೆ.

ಭಾವಾರ್ಥ:—"ಈಶ್ವರಃ ಸರ್ವಭೂತಾನಾಂ ಹೃದ್ದೇಶೆ ಅರ್ಜುನ! ತಿಷ್ಠತಿ" ಎಂಬ ವಚನದಂತೆ ಸ್ವಹೃದಯಾಂತರ್ಗತವಾದ ಜ್ಯೋತಿರ್ಲಿಂಗದ ಅನುಸಂಧಾನದಲ್ಲಿ ನಿರಂತರ ನಿರತನೂ, ಶಿವಶರಣ ಜನ ಸ್ತೋಮಕ್ಕೆ ಇಷ್ಟಾರ್ಥವನ್ನೀಯುವ ಕಲ್ಪವೃಕ್ಷದಂತಿರುವವನೂ, ಶಿವಯೋಗಿಗಳಿಗೆ ಮನೋಹರವಾದ ಸಂವಿತ್ತೆಂಬ ಸುಜ್ಞಾನಕ್ಕೆ ಕಮಲರೂಪನೂ, ಪ್ರಭುದೇವರೇ ಮೊದಲಾದ ಪರಮಮಾಹೇಶ್ವರ ಪ್ರಮಥಗಣಕ್ಕೆ ವಶವರ್ತಿಯೂ, ಶಿವಧರ್ಮೋತ್ತರ ಶಾಸ್ತ್ರದಲ್ಲಿ ವಿಸ್ತಾರವಾಗಿ ಉಕ್ತವಾಗಿರುವ ದಾನದಲ್ಲಿ ತತ್ಪರನೂ, ಸರಸವಾದ ಮಹಿಮಗಾನಕ್ಕೆ ಪಾತ್ರನೂ ಶಿವಾನುಭವಕ್ಕೆ ಮುಖ್ಯವಾದ ಪ್ರಮಾಣ ಸ್ವರೂಪನೂ, ಸನತ್ಕುಮಾರಾದಿಗಳಿಗೆ ಶಿವತತ್ತ್ವಬೋಧಕನೂ ಆದ ಶ್ರೀ ನಂದಿಯ ಅವತಾರ ಪುರುಷನೂ, ಶಿವಧರ್ಮಪಾಲನೆಗೋಸುಗ ರಾಜನೂ ಆದ ಬಸವೇಶ್ವರನು ನಿರಂತರವೂ ಸರ್ವೋತ್ಕೃಷ್ಟನಾಗಿರಲಿ ಎಂದು ಗ್ರಂಥಾರಂಭದಲ್ಲಿ ಕವಿಯು ಬಸವೇಶ್ವರನನ್ನು ಕುರಿತು ಮಂಗಳವನ್ನು ಮನೋಹರವಾಗಿ ಮಾಲಿನೀ ವೃತ್ತದಲ್ಲಿ ಹಾಡಿರುವನು.

ಕವಿಯು ತಾನು ಸ್ತುತಿಸಿದ ವಸ್ತುವಿನ ವಿಷಯದಲ್ಲಿ ಅಷ್ಟಕ್ಕೇ ತೃಪ್ತನಾಗದೆ ತನ್ಮಹಿಮಾಪರವಶನಾಗಿ ನೂತನವಾದ 'ಹರಿಗತಿ ರಗಳೆ' ಎಂಬ ಛಂದೋಬದ್ಧವಾದ ಕವಿತೆಯನ್ನು ಅಪಿಚ ಮುಂತಾದ ಗೀತಗಳಿಂದ ಮುಂದುವರಿಸಿದ್ದಾನೆ.

## ಕಳಿಕ-ಹರಿಗತಿ ರಘಟ

ಅಪಿಚ ಪುರಾತನ-ನೂತನ ಶಿವಗಣ-ಪಾದೋಕ-ಪರಿಲಸದಭಿಷೇಕಃ
ಕ್ಷಪಿತ-ವಿಪಲ್ಲವಪಲ್ಲವ-ಜಂಗಮ ಲಿಂಗ-ಸಮರ್ಚನ ನಿಚಿತವಿವೇಕಃ
ಸತತ ವಿಕಸ್ವರ-ಭಾಸ್ವರ ನಿಜ ಮುಖಮಂಡಲ ಖಂಡಿತ ರಜನೀನಾಥಃ
ಕೃತಯುಗ-ವರ್ತನ-ಕೀರ್ತನ ನಿರಸರ ನಿಪುಣ ಪವಿತ್ರಚರಿತ್ರಸನಾಥಃ॥

ಅಪಿಚ-ಮತ್ತು, ಪುರಾತನ-ಪ್ರಾಚೀನರೂ, ನೂತನ-ಸಮಕಾಲೀನರೂ ಆದ, ಶಿವಗಣ-ಪ್ರಮಥರೆಂದು ಪ್ರಸಿದ್ಧರಾದ ಮಾಹೇಶ್ವರರ, ಪಾದೋದಕ-ಶ್ರೀ ಚರಣ ತೀರ್ಥದಿಂದ, ಪರಿಸಲಸತ್-ಚೆನ್ನಾಗಿ ಶೋಭಿಸುವ, ಅಭಿಷೇಕಃ-ಅಭಿಷೇಚನವುಳ್ಳಂಥ, ಕ್ಷಪಿತ-ನಾಶಗೊಳಿಸಿದ, ವಿಪತ್-ವಿಪತ್ತಿನ, ಲವ-ಅಂಶವುಳ್ಳ ಎಂದರೆ ವಿಪತ್ತಿನ ಲೇಶವೂ ಇಲ್ಲದಿರುವ, ಆದ್ದರಿಂದಲೇ ಪಲ್ಲವ-ಶ್ರೀಷ್ಠರಾದ, ಜಂಗಮ-ಮಾಹೇಶ್ವರರ ಮತ್ತು ಲಿಂಗ-ಶಿವಲಿಂಗದ, ಸಮರ್ಚನ-ವಿಧಿಪೂರ್ವಕವಾಗಿ ಆರಾಧಿಸುವುದರಿಂದ, ನಿಚಿತ-ಸಂಗ್ರಹಿಸಿದ, ವಿವೇಕಃ- ಆತ್ಮತತ್ತ್ವಜ್ಞಾನವುಳ್ಳ, ಸತತ-ಅಹರ್ನಿಶದಲ್ಲಿಯೂ ವಿಕಸ್ವರ-ವಿಕಸನ ಸ್ವಭಾವವುಳ್ಳ ಅರ್ಥಾತ್ ಮಂದಹಾಸದಿಂದ ಕೂಡಿದ, ಭಾಸ್ವರ-ಪ್ರಕಾಶಸ್ವಭಾವದ, ನಿಜ-ತನ್ನ, ಮುಖಮಂಡಲ-ವದನ ಬಿಂಬದಿಂದ, ಖಂಡಿತ-ತಿರಸ್ಕರಿಸಿದ, ರಜನೀನಾಥಃ-ಚಂದ್ರನುಳ್ಳಂಥ, ಕೃತಯುಗ-ಸತ್ಯಯುಗವೆಂಬ ಹೆಸರಿನ ಯುಗಸಮಯದ, ವರ್ತನ-ಪುಣ್ಯವಾದ ಜೀವನದ, ಕೀರ್ತನ-ಹೊಗಳಿಕೆಯನ್ನು, ನಿರಸನ-ಅಲ್ಲಗಳೆಯುವುದರಲ್ಲಿ, ನಿಪುಣ-ಚತುರವಾದ ಎಂದರೆ ಉಚಿತವೂ ಹಾಗೆಯೇ ಶುದ್ಧವೂ ಆದ, ಚರಿತ್ರ-ಶೀಲ ಸ್ವಭಾವದಿಂದ, ಸನಾಥಃ-ಸಹಿತನಾದ, ಬಸವರಾಜಃ-ಶಿವಧರ್ಮರಾಜ್ಯಕ್ಕೆ ಒಡೆಯನಾದ ಬಸವೇಶ್ವರನು,

ಜಯತು- ಸರ್ವೋತ್ಕೃಷ್ಟನಾಗಿ ಇರಲಿ ಎಂದು ಮೊದಲಿನ ಪದ್ಯದೊಡನೆ ಅನ್ವಯವಾಗುತ್ತದೆ.

ಭಾವಾರ್ಥ:—ತನಗಿಂತ ಪ್ರಾಚೀನರೂ ತನ್ನ ಸಮಕಾಲೀನರೂ ಆದ ಪ್ರಮಥರೆಂದು ಹೆಸರುವಾಸಿಯಾದ ಮಾಹೇಶ್ವರರ ಶ್ರೀ ಚರಣ ತೀರ್ಥೋದಕದಿಂದ ಅಭಿಷೇಚನ ಮಾಡಿಕೊಳ್ಳುವವನೂ, ದುರಿತ ವಿದೂರರಾದ ಜಂಗಮರ ಹಾಗೆಯೇ ಶಿವಲಿಂಗದ ಅರ್ಚನೆಯಿಂದ ಪ್ರಾಪ್ತ ಶಿವತತ್ತ್ವ ವಿವೇಕಶಾಲಿಯೂ, ಹಗಲಿರುಳು ನಸುನಗೆಯಿಂದ ಕೂಡಿದ ಹೊಳೆವ ಮುಖಮಂಡಲದಿಂದ ಚಂದ್ರಬಿಂಬವನ್ನು ತಿರಸ್ಕರಿಸುವಂತೆ ಕಾಣುವವನೂ, ಪಾಪಪೂರಿತ ಕಲಿಕಾಲದಲ್ಲಿ ಅವತರಿಸಿದ್ದರೂ ಕೃತಯುಗದ ಸತ್ಯಧರ್ಮಾದಿ ಸುವರ್ತನೆಗಳನ್ನು ತನ್ನ ಗುಣ ಶೀಲ ಸ್ವಭಾವಗಳಿಂದ ಮೀರಿಸುವಂತಿರುವವನೂ, ಶಿವಜ್ಞಾನ ಶಿವಪೂಜಾ ಶಿವವ್ರತಾದಿಶಿವಧರ್ಮದಿಂದಲೂ,ವಿಭೂತಿ ರುದ್ರಾಕ್ಷಾದಿ ಶಿವಲಾಂಛನಗಳಿಂದಲೂ, ಕಲಿಕಲ್ಮಷವನ್ನು ಹೋಗಲಾಡಿಸುವುದಕ್ಕಾಗಿಯೇ ಅವತರಿಸಿದ ಮಹಾತ್ಮನೂ ಆದ ಬಸವೇಶ್ವರನು ಧನ್ಯನಾಗಿರಲಿ.

## ಕಳಿಕ-ಹರಿಗತಿ ರಘಟ

ಪ್ರಕಟಿತ ದರ್ಪಕ ದರ್ಪ ಕರೇಣು ಪ್ರಮಥನ ನಿಶಿತ ಕರಾಂಕುಶ ಹೇಳಃ
ಶುಕಮುಖಮಾನಸ ಮಾನಸಕಮಲಾಕರ ವಿಹರಣಚಣ ರಾಜಮರಾಳಃ
ಸ್ವಾನುಭವಾಂಚಿ[A] ತ ಸಂತತ ಕೂಡಲಸಂಗಮದೇವ ಧ್ಯಾನಾಭಿಜ್ಞಃ
ಸೂನೃತ ಭಾಷಣ ಭೂಷಣ ವಾಣೀಸಿಂಹಾಸನ ಗಂಭೀರ ರಸಜ್ಞಃ॥೩॥

ಟೀ:-ಪ್ರಕಟಿತ-ಚೆನ್ನಾಗಿ ಪ್ರಕಾಶಿತವಾದ ಎಂದರೆ ಕಾಣುವ, ದರ್ಪಕ-ಕಾಮನ, ದರ್ಪ-ಅಹಂಕಾರ ಎಂದರೆ ಹೆಮ್ಮೆ ಎಂಬ, ಕರೇಣು-ಆನೆಯನ್ನು, ಪ್ರಮಥನ-ಮರ್ದಿಸುವ ಕ್ರಿಯೆಯಲ್ಲಿ, ನಿಶಿತ-ತೀಕ್ಷ್ಣವಾದ, ಕರ-ಕೈಯ್ಯಲ್ಲಿರುವ, ಅಂಕುಶ-ಅಂಕುಶಾಯುಧದ, ಹೇಳಃ-ಲೀಲೆಯುಳ್ಳಂಥ, ಶುಕಮುಖ-

---

A ತ_ಕೂಡಲ ಸಂಗಮ ಸಂತತ ದೇವ-ಪಾ.

ಶುಕ ಋಷಿಯೇ ಮೊದಲಾದ ಮಹಾಮುನಿಗಳ, ಮಾನಸ-ಮನಸ್ಸೆಂಬ, ಮಾನಸ-ಮಾನಸನಾಮಕ, ಕಮಲಾಕರ-ಸರೋವರದಲ್ಲಿರುವ ಹೃದಯ ಕಮಲಗಳ ಗುಂಪಿನಲ್ಲಿ, ವಿಹರಣಚಣ-ವಿಹಾರಲೀಲೆಯಲ್ಲಿ ನಿಪುಣನಾದ, ರಾಜಮರಾಳಃ-ರಾಜಹಂಸದಂತಿರುವ, ರಾಜಮಣಿಯಾದ ಸ್ವ-ತನ್ನ, ಅನುಭವ-ಅನುಭವ ಜ್ಞಾನದಿಂದ, ಅಂಚಿತ-ಪ್ರಾಪ್ತವಾದ, ಆದ್ದರಿಂದಲೇ ಸಂತತ-ಅವಸ್ಥಾತ್ರಯದಲ್ಲಿಯೂ ತ್ರಿಕಾಲದಲ್ಲಿಯೂ ಸಹ, ಕೂಡಲ ಸಂಗಮದೇವ-ಪವಿತ್ರ ಮಲಪ್ರಭಾ-ಕೃಷ್ಣಾ ನದಿಗಳ ಸಂಗಮದಲ್ಲಿರುವ ಇಷ್ಟದೇವನಾದ ಸಂಗಮೇಶ್ವರನ, ಧ್ಯಾನಾಭಿಜ್ಞಃ-ಬಾಹ್ಯಾಂತರಾನು ಸಂಧಾನದಲ್ಲಿ ಕುಶಲನಾದ, ಸೂನೃತ-ಹಿತವೂ ಮಿತವೂ ಸತ್ಯವೂ ಆದ, ಭಾಷಣ-ನುಡಿ ಅದಕ್ಕನುಗುಣವಾದ ನಡೆ ಇವುಗಳೇ, ಭೂಷಣ-ಆಭರಣಗಳಾಗಿಯುಳ್ಳ, ವಾಣೀಸಿಂಹಾಸನ-ಸರಸ್ವತೀಪೀಠದ, ಗಂಭೀರ-ಗೂಢವಾದ, ರಸಜ್ಞಃ-ರಸಾಭಿರುಚಿಯನ್ನು ಬಲ್ಲಂಥ ರಸಾಸ್ವಾದವನ್ನು ತಿಳಿದ, ಬಸವರಾಜಃ ಜಯತು ಎಂದು ಮೊದಲಿನಂತೆಯೇ ಅರ್ಥ.

ಭಾವಾರ್ಥ:—ಮತ್ತಮಾತಂಗವನ್ನು ಮರ್ದನಮಾಡುವುದಕ್ಕೆ ಅಂಕುಶದ ಕಾರ್ಯವು ಹೇಗೋ ಅದರಂತೆ ಕಾಮವಾಸನೆಯನ್ನು ತ್ರಿಕರಣಪೂರ್ವಕವಾಗಿ, "ಎಲ್ಲಿ ನೋಡಿದಡಲ್ಲಿ ಮನವೆಳಸಿದೊಡೆ–ನಿಮ್ಮಾಣೆ–ಪರವಧುವನು ಮಹಾದೇವಿ ಎಂಬೆ" ಎಂಬ ಆತನ ನುಡಿಯಂತೆ, ನಡೆಯಲ್ಲಿಯೂ ಸಹ ಅರಿದು ಆಚರಿಸಿ ಮಹಾಜಿತೇಂದ್ರಿಯನಾದವನೂ, ಮಾನಸ ಸರೋವರಗಳಲ್ಲಿ ಬೆಳೆದಿರುವ ತಾವರೆಗಳ ಗುಂಪಿನಲ್ಲಿ ವಿಹಾರಾಸಕ್ತವಾದ ರಾಜಹಂಸದೋಪಾದಿಯಲ್ಲಿ ರಾಜಶ್ರೇಷ್ಠನಾಗಿ, ಶುಕಮುನಿಯೇ ಮೊದಲಾದ ಮಹರ್ಷಿಗಳ ಹೃದಯ ಕಮಲದಲ್ಲಿ ವಿಹರಿಸುವ ಶಕ್ತಿಯುಳ್ಳವನೂ, ಸ್ವಾತ್ಮಾನುಭವದಿಂದ ಪಡೆದ ಸಂಗಮೇಶ್ವರನ ಧ್ಯಾನದಲ್ಲಿ ಸದಾ ಆಸಕ್ತನೂ, ಯಾವಾಗಲೂ ಕಾಯವಾಙ್ಮನಸ್ಸೆಂಬ ತ್ರಿಕರಣ ಪೂರ್ವಕವಾಗಿ ಶುದ್ಧವೂ, ಸತ್ಯವೂ, ಹಿತವೂ, ಮಿತವೂ ಆದ ನುಡಿ ತದನುಗುಣವಾದ ನಡೆಯುಳ್ಳವನೂ ಮತ್ತು ಮಹಾಯೋಗೀಶ್ವರರಿಂದಲೂ ಅರಿಯಲಶಕ್ಯವಾದ ವಾಙ್ಮಯ ರಹಸ್ಯವನ್ನು ಆಮೂಲಾಗ್ರವಾಗಿ ಬಲ್ಲವನೂ ಆದ ಶ್ರೀ ಬಸವೇಶ್ವರನು ಜಯಶೀಲನಾಗಲಿ.

## ಉತ್ಕಳಿಕ

Aಕಾಕಲ ನಾರಾಚ ಧ್ವನಿಸಾರ ಶ್ರೀವಿಶ್ರುತ ಪೇಶಲ ಶಾರೀರ
ವ್ಯತಿಕರ ನಾನಾಗತಿನಿಸ್ಸೀಮ ಶ್ರುತಿಸಂಧಾಯಿಚಮತ್ಕೃತಿಭೂಮ
ಶ್ರುತಿBಮುಖರ ಸ್ವರಸುರಸಸಮೇತ ಸ್ಮೃತಿನಿಕುರುಂಬರಸಾಯನಗೀತ
ಪ್ರಮುದಿತಹೃದ್ವರ್ತನ ಶಿತಿಕಂಠಃ ಶಮದಮಲಾಲನ ಗುಣಿತೋತ್ಕಂಠಃ||

ಟೀಕಾ— ಕಾಕಲ-ಮನೋಹರವಾದ, ನಾರಾಚ-ಬಿಲ್ಲಿನ, ಧ್ವನಿಸಾರ-ಧ್ವನಿಯಂತೆ ಧ್ವನಿಯುಳ್ಳ, ಮತ್ತು ಶ್ರೀವಿಶ್ರುತ-ಲೋಕವಿಖ್ಯಾತನಾದ, ಪೇಶಲ-ಮನಸೆಳೆಯುವಂತೆ ಸುಕುಮಾರವಾದ, ಶಾರೀರ-ಮಧುರ ಧ್ವನಿಯ, ವ್ಯತಿಕರ-ಸಂಬಂಧದಿಂದ, ನಾನಾಗತಿ-ಅನೇಕ ತೆರನಾದ ಗೀತದ ಗತಿಗಳಲ್ಲಿ, ನಿಸ್ಸೀಮ ಪ್ರಾಜ್ಞನೂ,ಹಾಗೆಯೇ ಶ್ರುತಿ-ಋಗಾದಿ ಪ್ರಸಿದ್ಧ ಚತುರ್ವೇದಗಳಿಗೆ, ಸಂಧಾಯಿ-ಸಂಧಾನಿಸುವ, ಚಮತ್ಕೃತಿ-ಜಾಣ್ಮೆಯಲ್ಲಿ, ಭೂಮ-ಹೆಚ್ಚಿನವನೂ, ಹಾಗೆಯೇ ಶ್ರುತಿಮುಖರ-ಪಾವನ ವೇದ ಮಂತ್ರಾಕ್ಷರಗಳಲ್ಲಿ ಹೊರ ಹೊಮ್ಮುವ, ಸ್ವರ-ಉದಾತ್ತಾನುದಾತ್ತಾದಿ ಸ್ವರಗಳ ಮತ್ತು ತಾರಮಂದರಾದಿ ಧ್ವನಿಗಳ ಮೇಳನದಿಂದ, ಸುರಸ-ಕಿವಿಗೆ ಇಂಪಾದ ರಸಮಾಧುರ್ಯದಿಂದ, ಸಮೇತ-ಕೂಡಿದ್ದಾಗಿಯೂ, ಅಲ್ಲದೆ ಯಾವ ಸ್ಮೃತಿ-ಪ್ರಸಿದ್ಧ ಧರ್ಮಶಾಸ್ತ್ರಗಳ, ನಿಕುರುಂಬ-ಸಮೂಹದ ಮಿಲನದಿಂದಲೂ ಎಂದರೆ ಸ್ಮೃತಿಯ ಅರ್ಥದೊಡನೆ ಕೂಡಿರುವುದರಿಂದಲೂ, ರಸಾಯನ-ರಸವತ್ತಾಗಿ ಮಧುರವಾದ, ಗೀತ-ಶಿವಗಾನದಿಂದಲೂ, ಪ್ರಮುದಿತ-ಸಂತೋಷಗೊಳಿಸಿದ ಹೃದ್ವರ್ತನ-ಹೃದಯಗತ ಅಷ್ಟದಳಕಮಲದ ಕರ್ಣಿಕೆಯ-ಮಧ್ಯದಲ್ಲಿರುವ, ಶಿತಿಕಂಠಃ-ಸ್ವಪ್ರಕಾಶ ಪರಮೇಶ್ವರನುಳ್ಳಂಥ, ಆದಕಾರಣ ಶಮ- ಮನಸ್ಸಾದಿ,ಅಂತರಿಂದ್ರಿಯ ವ್ಯಾಪಾರ ನಿಗ್ರಹವೇನು, ದಮ-ನೇತ್ರಾದಿ ಬಹಿರಿಂದ್ರಿಯ ವ್ಯಾಪಾರ ನಿಗ್ರಹವೇನು, ಇವುಗಳ ಲಾಲನ.ಅಭ್ಯಾಸವಶದಿಂದ, ಗುಣಿತೋತ್ಕಂಠಃ-ಹೆಚ್ಚಾದ್ವ ಲವಲವಿಕೆಯುಳ್ಳವನಾದ.ಬಸವರಾಜಃ ಜಯತು-ಎಂದು ಹಿಂದಿನಂತೆಯೇ ಅರ್ಥ.

---

A ಕಾವುಳ B ಮಧುರ. ಪಾ

ಭಾವಾರ್ಥ—ಬಿಲ್ಲಿನ ಧ್ವನಿಯಂತೆ ಗಂಭೀರವಾಗಿ ಧ್ವನಿ ಮಾಡುವವನೂ, ಸುಪ್ರಸಿದ್ಧವೂ ಅತಿಕೋಮಲವೂ ಆದ ಶಾರೀರ ಸಂಪತ್ತಿನಿಂದ ಕೂಡಿದವನೂ, ಹಲವು ಬಗೆಯಾದ ಸಂಗೀತದ ಗಮಕಗಳಲ್ಲಿ ಕೋವಿದನೂ ಚತುರ್ವೇದಗಳ ಅನುಸಂಧಾನದಲ್ಲಿ ಚಮತ್ಕಾರಾತಿಶಯ ಶಾಲಿಯೂ, ಹಾಗೆಯೇ ವೇದ ಮಂತ್ರಗಳ ಉಚ್ಚಾರಣೆಯಲ್ಲಿ ಉಪಯುಕ್ತವಾದ ಉದಾತ್ತಾದಿ ಸ್ವರಗಳ ಮತ್ತು ಮಂದರಾದಿ ಶಬ್ದವಿಶೇಷದ ಮೇಳನದಿಂದ ಕಿವಿಗಿಂಪಾದ ಮಾಧುರ್ಯ ರಸದಿಂದ ಕೂಡಿದ್ದಾಗಿಯೂ ಮತ್ತು ಸ್ಮೃತಿಗಳ ಅರ್ಥಾನುಸರಣೆಯಿಂದ ಶ್ರವಣರಮಣೀಯವೂ ಮನೋಹರವೂ ರಸಭೂಯಿಷ್ಠವೂ ಆದ ಶಿವಸ್ತುತಿಯನ್ನು ಮಾಡುತ್ತ ತನ್ನ ಹೃದಯ ಪುಂಡರೀಕದಲ್ಲಿ ಆಹಂ ಪ್ರತ್ಯಯ ಗೋಚರನಾದ ಮಹಾದೇವನನ್ನು ಸಂತೋಷಿಸುವ ಮನೋವ್ಯಾಪಾರದಿಂದ ಕೂಡಿದವನೂ, ಬಾಹ್ಯಾಂತರಿಕಗಳಾದ ಮನ ನೇತ್ರಾದಿ ಇಂದ್ರಿಯ ನಿಗ್ರಹದಿಂದ ಹೆಚ್ಚಾದ ಲವಲವಿಕೆಯುಳ್ಳವನೂ ಆದ ಬಸವೇಶನು ಜಯಿಸಲಿ.

ಇಲ್ಲಿಂದ ಮುಂದೆ ಕವಿಯು ಮೊದಲಿನಹಾಗೆಯೇ ಕಾವ್ಯಕ್ಕೆ ವಿಷಯನಾದ ಬಸವೇಶನನ್ನು ವೈರಾಗ್ಯಶೀಲರಾದ ಶಿವಯೋಗಿಗಳೂ ಪಂಡಿತರೂ ತಲೆದೂಗಿ ಪ್ರಶಂಸಿಸುವಂತೆ (ಶಾ. ವಿ. ವೃ) ದ್ವಿತೀಯಾವಿಭಕ್ತಿಯಲ್ಲಿ ನುತಿಸುತ್ತಾನೆ.

### ದ್ವಿತೀಯಾವಿಭಕ್ತಿಃ

ವೇದಾಂತಾರ್ಥ ರಹಸ್ಯಭೇದ ಪಿಶುನ ವ್ಯಾಪಾರ ಪಾರಂಗತಮ್
ಪ್ರೌಢಪ್ರಕ್ರಿಯ ವಾಕ್ಪ್ರಪಂಚ ರಚನಾಚಾತುರ್ಯಧುರ್ಯಾಶಯಮ್
ದೈವಾಸ್ತಿಕ್ಯ ನಿದರ್ಶನ ಪ್ರತಿಭುವಂ ತಾಪಚ್ಛಿದಾ ಪಂಡಿತಮ್
ಭಾಂಡಾಗಾರಧುರೀಣ ಮತ್ರ ಬಸವಾಮಾತ್ಯಂ ಕಿಮಾಚಕ್ಷ್ಮಹೆ? ||೫||

ಟೀ—ವೇದಾಂತಾರ್ಥ-ವೇದಾಂತವೆಂದು ವಿಖ್ಯಾತವಾದ ಆಗಮೋಪನಿಷತ್ತಿನ ಅರ್ಥದ, ರಹಸ್ಯಭೇದ-ಗುಟ್ಟಿನ ಭೇದವನ್ನು ಎಂದರೆ ರೀತಿಯನ್ನು, ಪಿಶುನ-ಸೂಚಿಸುವ, ವ್ಯಾಪಾರ-ವ್ಯವಸಾಯದಲ್ಲಿ, ಪಾರಂಗತಂ-ಪ್ರವೀಣನಾದವನೂ, ಪ್ರೌಢಪ್ರಕ್ರಿಯ-ಉತ್ತಮತರದ ಶಬ್ದಾರ್ಥ ವ್ಯುತ್ಪತ್ತಿಯಿಂದ ಕೂಡಿದ, ವಾಕ್ಪ್ರಪಂಚ-ವಚನ ವಾಙ್ಮಯದ, ರಚನಾಚಾತುರ್ಯ-ನಿರ್ಮಿಸುವ ಚತುರತನದಲ್ಲಿ

ಧುರ್ಯ-ಶ್ರೇಷ್ಠವಾದ, ಆಶಯಂ-ಉದಾತ್ತವಾದ ಅಭಿಪ್ರಾಯವುಳ್ಳವನೂ, ದೈವಾಸ್ತಿಕ್ಯ-ಈಶ್ವರಾಸ್ತಿತ್ತ್ವದ ವಿಷಯವಾಗಿ, ನಿದರ್ಶನ-ದೃಷ್ಟಾಂತವನ್ನು ಎಂದರೆ ಪ್ರಮಾಣವನ್ನು ತೋರಿಸುವುದರಲ್ಲಿ,ಪ್ರತಿಭುವಂ-ಪ್ರತಿನಿಧಿಯಂತಿರುವ ಕಾರಣ,ತ್ರಿತಾಪಚ್ಛಿದಾ-ಸಂಚಿತ ಆಗಾಮಿ ಪ್ರಾರಬ್ಧ ಎಂಬ ತಾಪತ್ರಯವನ್ನು ಹೋಗಲಾಡಿಸುವುದರಲ್ಲಿ, ಪಂಡಿತಂ-ಕುಶಲನೂ, ಭಾಂಡಾಗಾರ-ಧನ ಕೋಶದ ಅಧ್ಯಕ್ಷರಲ್ಲಿ, ಧುರೀಣಂ-ಧುರಂಧರನೂ ಆದಂಥ, ಬಸವಾಮಾತ್ಯಂ-ಬಸವೇಶ್ವರ ಮಂತ್ರಿಯನ್ನು ಉದ್ದೇಶಿಸಿ, ಅತ್ರ-ಇಲ್ಲಿ,ಕಿಂ-ಏನನ್ನು ? ಆಕ್ಷ್ಮಹೇ-ವರ್ಣಿಸೋಣ? ಅರ್ಥಾತ್ ಹೆಚ್ಚು ಹೊಗಳುವ ಅಗತ್ಯವಿಲ್ಲವೆಂದು ಭಾವ. ಈ ಪದ್ಯವು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿದೆ. ಅದರ ನಿಯಮವು "ಸೂರ್ಯಾಶ್ವೈರ್ಮಸಜಸ್ತತಾಸ್ಸಗುರವಃ ಶಾರ್ದೂಲವಿಕ್ರೀಡಿತಂ" ಎಂದಿದೆ. ಇದರಲ್ಲಿ ಪ್ರತಿ ಪಾದಕ್ಕೆ ೧೯ ಅಕ್ಷರಗಳಿರುತ್ತವೆ.

ಭಾವಾರ್ಥ—ಈಶಾದಿ ಉಪನಿಷತ್ತುಗಳಲ್ಲಿಯೂ, ಕಾಮಿಕಾದಿ ಆಗಮಗಳಲ್ಲಿಯೂ ಗೂಢವಾಗಿರುವ ಆತ್ಮತತ್ತ್ವಾರ್ಥವು, ಸರ್ವಸಾಮಾನ್ಯ ಜನರಿಗೆ ಗೋಚರಿಸುವಂತೆ ಸುಲಲಿತವೂ ನೂತನವೂ ಆದ ಸರಣಿಯಲ್ಲಿ ಕನ್ನಡ ವಚನಗಳನ್ನು ರಚಿಸುವ ವಿಷಯದಲ್ಲಿ ನಿಪುಣನೂ, ಹಾಗೆಯೇ ವಿದ್ವಾಂಸನಾಗಿ ಸಮಯೋಚಿತ ಶಬ್ದಾರ್ಥಗಳಲ್ಲಿ ಅತಿ ಗಾಂಭೀರ್ಯದಿಂದ ಕೂಡಿದ ರಚನೆಯ ವಿನ್ಯಾಸದಲ್ಲಿ ಬುದ್ಧಿ ಪ್ರವೀಣತೆಯುಳ್ಳವನೂ, "ಈಶ್ವರಾಸ್ತಿತ್ತ್ವ" ಎಂದರೆ 'ದೇವರಿದ್ದಾನೆ' ಎಂಬ ಆಸ್ತಿಕ್ಯವಾದಕ್ಕೆ ಪ್ರಮಾಣವನ್ನು ತೋರಿಸುವುದರಲ್ಲಿ ಮಹಾಚತುರಮತಿಯೂ, ಹಾಗೂ ಬಿಜ್ಜಳರಾಜನ ಕೋಶಾಧ್ಯಕ್ಷ ಪದವಿಯನ್ನು ನಿರ್ವಹಿಸುವ ಕಾರ್ಯದಲ್ಲಿ ಧುರೀಣನೂ ಮತ್ತು ಅವನಿಗೆ ಮುಖ್ಯಮಂತ್ರಿಯೂ ಸಹ ಆಗಿದ್ದ ಶ್ರೀ ಬಸವೇಶನನ್ನು ಪ್ರಶಂಸಿಸುವುದು ಯಾರಿಗೆ ತಾನೇ ಸಾಧ್ಯವಾದೀತು.

ಕವಿಯು ಬಸವೇಶನ ಪ್ರಶಂಸೆಯಲ್ಲಿ ತೃಪ್ತಿಯಿಲ್ಲದೆ ಅಪಿಚ ಮುಂತಾದ ಕೆಲವು ವಾಕ್ಯಗಳಿಂದ 'ದ್ವಿರದಗತಿ ರಗಳೆ' ಎಂಬ ಅನ್ವರ್ಥ ಛಂದಸ್ಸಿನಲ್ಲಿ ಬೇರೆರೀತಿಯಾಗಿ ಭಕ್ತಿಪರವಶಚಿತ್ತನಾಗಿ ತನ್ನ ಆರಾಧ್ಯಮೂರ್ತಿಯಾದ ಬಸವೇಶ್ವರನನ್ನು ಮತ್ತೆ ಮತ್ತೆ ಸ್ತುತಿಸಿರುತ್ತಾನೆ.

**ಕಳಿಕ–ದ್ವಿರದಗತಿ ರಘಟೆ**

ಅಪಿಚ A ಕರಕಮಲತಲ ವಿಹಿತ ಪುರಹರ ಯಜನಮ್ ।
ಅವBಹಿತ ಕರಣ ಸತತ ಪರಿಮುದಿತ ಶರಣಜನಮ್ ॥
ಅಹಿಮಕರ ಶಶಿಸರಣಿ ವಿಮುಖ ನಿಜ ಪವನಗತಿಮ್ ।
ಅಹಿಪರಿಷ ದಧಿಪ ನಿಭ ವಿವಿಧ ಮಧುರಿಮ ಸುಮCತಿಮ್ ॥೬॥

ಟೀಕಾ–ಅಪಿಚ-ಇಷ್ಟಲ್ಲದೆ, ಕರಕಮಲತಲ-ತಾವರೆಗೆ ಸಮಾನವಾದ ಕರಸ್ಥಳದಲ್ಲಿ, ವಿಹಿತ-ವಿರಚಿತವಾದ, ಪುರಹರ-ತ್ರಿಪುರಗಳನ್ನು ಸಂಹರಿಸಿದ, ಆದ್ದರಿಂದಲೇ ನೇತ್ರ ಹಸ್ತಪಾದಾದಿ ಜ್ಞಾನಕರ್ಮೇಂದ್ರಿಯನಿಕರದಿಂದ ಕೂಡಿರುವ ಜೀವನಿಗೆ ಪುರಕ್ಕೆ ಸದೃಶವೂ ನಶ್ವರವೂ, ಹೇಯವೂ ಆದ ದೇಹವನ್ನು ತೊಲಗಿಸಿ ಮುಕ್ತಿಸಾಂಮ್ರಾಜ್ಯ ಪದವಿಯನ್ನೀಯುವುದರಲ್ಲಿ ಶಕ್ತನಾದ ಪರಮೇಶ್ವರನ, ಯಜನಂ-ಪೂಜೆಯನ್ನು ಗೆಯ್ಯುವವನೂ, ಆದಕಾರಣವಾಗಿಯೇ ಅವಹಿತ–ಸಾವಧಾನದಿಂದ ಕೂಡಿದ, ಕರಣ-ಕಾಯ ವಾಕ್-ಮನಸ್ಸೆಂಬ ತ್ರಿಕರಣ ಪೂರ್ವಕವಾಗಿ, ಸತತ-ಎಲ್ಲಾಸಮಯದಲ್ಲಿಯೂ ಪರಿಮುದಿತ-ಆನಂದ-ಪಡಿಸಿದ, ಶರಣಜನಂ-ಮಾಹೇಶ್ವರಜನನಿಕರವುಳ್ಳ, ಅಹಿಮ-ಶೀತವಲ್ಲದ ಎಂದರೆ ಉಷ್ಣವಾದ, ಕರ-ಕಿರಣಗಳಿರುವ ಅರ್ಥಾತ್ ಸೂರ್ಯನು, ಮತ್ತು ಶಶಿ-ಶಶ ಎಂಬ ಪ್ರಾಣಿಯನ್ನು ಗುರುತನ್ನಾಗಿ ಧರಿಸಿರುವ ಎಂದರೆ ಚಂದ್ರನು ಇವರಿಬ್ಬರ ಸರಣಿ-ಮಾರ್ಗದಲ್ಲಿ ಎಂದರೆ ಪತಂಜಲಿ ಮುನಿಕೃತವಾದ ಯೋಗಶಾಸ್ತ್ರದಲ್ಲಿ ಹೇಳಿರುವ, ಸೂರ್ಯಚಂದ್ರಮಾರ್ಗಗಳೆಂದು ವಿಖ್ಯಾತವಾಗಿ, ಪ್ರಾಣಾಯಾಮ ಕ್ರಿಯೆಯಲ್ಲಿ ಉಪಯುಕ್ತವಾದ, ಪೂರಕ ರೇಚಕಗಳಿಗೆ ಸಾಧನವಾದ, ವಾಯುವಿನ ಗಮನ ನಿರ್ಗಮನ ಹಾದಿಯಲ್ಲಿ, ವಿಮುಖ–ಹಿಂದಿರುಗಿದ, ಹಿಮ್ಮೆಟ್ಟಿದ, ನಿಜ-ತನ್ನ ಪವನಗತಿಂ-ಪ್ರಾಣಧಾರಣಕ್ಕಾಗಿ, ವಾಯುವಿನ ಗಮನಾಽ ಗಮನವುಳ್ಳ, ಎಂದರೆ ಕೇವಲ ಕುಂಭಕಾಸಕ್ತನಾಗಿ ಅಥವಾ ಪ್ರಾಣಾಯಾಮಾವಸ್ಥೆಯನ್ನು ಮೀರಿ ಲೋಕಕಲ್ಯಾಣಕ್ಕಾಗಿ ಜೀವನ್ಮುಕ್ತರ ಅವಸ್ಥೆಯಲ್ಲಿರುವನೆಂದು ಭಾವ. ಆದ್ದರಿಂದ ಅಹಿಪರಿಷತ್--ತಕ್ಷಕಾದಿ ಮಹಾನಾಗಗಳ,ಸರ್ಪಗಳ ಸಭಿ

---

A ಕರತಲಯುಗಳ, ಪಾ. B ಪ-ಶ್ಯೈ. ಪಾ. C. ಗ_ಮ್ಯ. ಪಾ.

ತಿಗೆ, ಅಧಿಪ-ಒಡೆಯನಾದ ಆದಿಶೇಷನಿಗೆ, ನಿಭ-ಸರಿಸಮಾನವಾದ, ಎಂದರೆ ಇಲ್ಲಿ-ಈಶ್ವರನ ಕಂಠಭೂಷಣವಾಗಿರುವ ಆದಿಶೇಷನನ್ನು ವ್ಯಾಕರಣ ಸೂತ್ರ ಕರ್ತೃವಾದ ಪಾಣಿನಿಪ್ರಮುಖರ ಇಷ್ಟಾರ್ಥಸಿದ್ಧಿಗಾಗಿ ಮಹೇಶ್ವರನು ಕಳುಹಿಸಿದನೆಂಬ ಪ್ರತೀತಿಯಿಂದ ಶೇಷಾವತಾರನೆಂದು ಹೆಸರಾದಂಥ, ವ್ಯಾಕರಣ ಮಹಾಭಾಷ್ಯಕ್ಕೆ ಆಚಾರ್ಯನಾದ ಪತಂಜಲಿ ಮಹಾ ಮುನಿಗೆ ಸಮವಾದ, ವಿವಿಧ-ನಾನಾ ರೀತಿಯಾದ ಮತ್ತು ಮಧುರಿಮ-ಹಿತವೂ ಮಿತವೂ ಆಗಿ ಶ್ರವಣ ಮನಗಳಿಗೆ ಇಂಪೂ ಆಪ್ಯಾಯಮಾನವೂ ಆಗಿರುವ, ಹಾಗೆಯೇ ಸುಮತಿಂ-ಮನೋಹರವೂ ಪ್ರತ್ಯುತ್ಪನ್ನವೂ ಆದ ನವೀನಪ್ರತಿಭೆಯಿಂದ ಕೂಡಿದವನಾದ ಶ್ರೀ ಬಸವೇಶನ ವಿಷಯದಲ್ಲಿ ಕಿಂ ಆಚಕ್ಷ್ಮಹೇ? ಎಂದು ಮೊದಲಿನಂತೆಯೇ ಅರ್ಥ.

ಭಾವಾರ್ಥ – ಯಾವನು ತ್ರಿಪುರಗಳನ್ನು ದಹಿಸಿದ ಪರಮೇಶ್ವರನನ್ನು ನಶ್ವರವಾದ ದೇಹಪುರವನ್ನು ತೊಲಗಿಸಿ ಮುಕ್ತಿಯನ್ನು ಸಾಧಿಸುವುದಕ್ಕಾಗಿ ತನ್ನ ಕರಕಮಲಗಳಲ್ಲಿ ಪೂಜಿಸುತ್ತಿದ್ದನೋ, ಅಂತೆಯೇ ಆಸಕ್ತಿಯಿಂದ ತ್ರಿಕರಣಪೂರ್ವಕವಾಗಿ ಈಶ್ವರ ಸ್ವರೂಪರಾದ ಮಾಹೇಶ್ವರರನ್ನು ಸದಾ ತಣಿಸುತ್ತಿದ್ದನೋ, ಹಾಗೆಯೇ ಯೋಗಶಾಸ್ತ್ರನಲ್ಲಿ ಉಕ್ತವಾಗಿರುವ ಪ್ರಾಣಾಯಾಮಕ್ಕೆ ಸಾಧನವಾದ ಪೂರಕ ರೇಚಕವೆಂಬ ವಾಯುವಿನ ಗಮನಾಗಮನಗಳಿಗೆ. ಮಾರ್ಗವಾದ ಸೂರ್ಯ ಚಂದ್ರ ಮಾರ್ಗಗಳನ್ನು ಮೀರಿ ಪ್ರಾಣಧಾರಣಕ್ಕಾಗಿ ವಾಯುವನ್ನುಸೇವಿಸಿ ಜೀವನ್ಮುಕ್ತನಾಗಿದ್ದನೋ, ಮತ್ತು ಆದಿಶೇಷನ ಅವತಾರಿಯಾಗಿ ವ್ಯಾಕರಣ ಶಾಸ್ತ್ರಭಾಷ್ಯವನ್ನುರಚಿಸಿದ ಲೋಕವಿಖ್ಯಾತ ಪತಂಜಲಿ ಮಹಾಮುನಿಗೆ ಸಮವಾದ,ಹಲವುಬಗೆಯಾದ ಉತ್ತಮತರವಾದ ಬುದ್ಧಿ ಕುಶಲತೆಯಿಂದ ಯುಕ್ತನಾಗಿದ್ದನೋ; ಅಂಥ ಬಸವೇಶ್ವರನ ವಿಷಯದಲ್ಲಿ ನಾನು ಹೇಳುವ ಮಾತುಗಳು ಸಾಲದಾಗಿವೆ.

### ಕಳಿಕ-ದ್ವಿರದಗತಿ ರಘುಟ

ಅತುಲ। ಕರಿಹರಿಕನಕ ಮಣಿಗಣ ಗುಣಿತ ವಿಭವಮ್

ಅತಿವಿಷಮ ಬಹುಳತರ ಭವಜಲಧಿ ಕಲಶಭವಮ್

---

ಹರಿಣಿಪಾ.

ಅಮಲನಿಜ ಹೃದಯಕೃತ ಪರಿಚಯ ವಿದನುಭವನಮ್
ಶಮಿತ ನಿರವಧಿಕ ಕಲಿವೃಜಿನ ಸಹಚರ ಭವನಮ್ ||೭||

ಟೀ—ಅತುಲ-ಅಪರಿಮಿತವೂ ಅಸಂಖ್ಯಾತವೂ ಆದ,ಕರಿ-ಆನೆಗಳ ಮತ್ತು ಹರಿ-ಕುದುರೆಗಳ ಶ್ರೇಣಿಯಿಂದಲೂ, ಕನಕ-ಬಂಗಾರ,ಮಣಿಗಣ-ಪದ್ಮರಾಗಾದಿ ರತ್ನಗಳ ರಾಶಿಯಿಂದಲೂ, ಗುಣಿತ-ಇಮ್ಮಡಿಯೂ ಅಧಿಕವೂ ಆದ,ವಿಭವಂ-ರಾಜವೈಭವದಿಂದ ಪರಿಪೂರ್ಣನೂ, ಹಾಗೂ ಅತಿವಿಷಮ-ಅತಿಕಷ್ಟಕರವಾದ, ಸುಖದುಃಖವೆಂಬ ತರಂಗವುಳ್ಳ, ಬಹುಳತರ-ಬಹು ವಿಸ್ತಾರವಾದ, ಒಂದೆರಡು ಜನ್ಮಗಳಲ್ಲಿ ಮುಗಿಯದಿರುವ, ಭವ-ಜನನ ಜರಾಮರಣ ರೂಪ(ಗಳೆಂಬ) ವಾದ ಮಹಾಮಕರಗಳಿಂದ, ಭಯಂಕರವಾಗಿರುವ, ಜಲಧಿ—ಮಹಾಸಾಗರಕ್ಕೆ, ಕಲಶ ಭವಂ—ಅಗಸ್ತ್ಯ ಮುನಿಯಂತಿರುವ, ಎಂದರೆ ಅಗಾಧವೂ ಅಪರಿಮಿತವೂ ಆದ ಸಾಗರ ಜಲವನ್ನು ಅಗಸ್ತ್ಯ ಮುನಿಯು ಶೋಷಿಸಿದಂತೆ ಈತನು ಸಂಸಾರ ಸಾಗರವನ್ನು ತೊಲಗಿಸುವ ಶಕ್ತಿಸಂಪನ್ನನೆಂದು ಭಾವ.ಅಮಲ-ನಿರ್ಮಲವಾದ, ನಿಜ-ತನ್ನ, ಹೃದಯ-ಹೃದಯದಲ್ಲಿ, ಕೃತ.ಮಾಡಿಕೊಂಡ, ಪರಿಚಯವಿತ್-ಆತ್ಮಪರಿಚಯವನ್ನು ಬಲ್ಲ-ಪ್ರಭುದೇವರೇ ಮುಂತಾದ ಶಿವಜ್ಞಾನಿಗಳ ಸಂಗದಿಂದ ಉಂಟಾದ, ಅನುಭವಂ-ಆತ್ಮಾನುಭವವಿರುವ, ಆದ ನಿಮಿತ್ತವಾಗಿಯೇ, ಶಮಿತ-ಪ್ರಶಾಂತವಾದ, ನಿರವಧಿಕ-ಕೊನೆಮೊದಲಿಲ್ಲದ, ಕಲಿವೃಜಿನ-ಕಲಿಕಾಲದ ಪಾಪದ ಅಂಶಮಾತ್ರವೂ ಇಲ್ಲದ ಈಶ್ವರನ, ಸಹಚರ-ಜೊತೆಯಲ್ಲಿ ಓಡಾಡುವ ನಂದೀಶನ ಅವತಾರಿಯಾಗಿ ಭವಂ—ಇರುವ ಬಸವಾಮಾತ್ಯಂ ಕಿಂ ಆಚಕ್ಷ್ಮಹೆ?—ಎಂದು ಮೊದಲಿನ ಅರ್ಥವೇ-

ಭಾವಾರ್ಥ—ಅಸಂಖ್ಯಾತವಾದ ಆನೆ ಕುದುರೆಗಳಿಂದಲೂ, ಸುವರ್ಣ ಮತ್ತು ಪದ್ಮರಾಗಾದಿ ರತ್ನಗಳಿಂದಲೂ, ಕೂಡಿ ಹೆಚ್ಚಾದ ವೈಭವದಿಂದ ಇದ್ದರೂ, ಸುಖದುಃಖವೆಂಬ ಅಲೆಗಳಿಂದ ಏರಿಳಿತವಿರುವ, ಮತ್ತು ಜನನ ಮರಣರೂಪ ಮೊಸಳೆಗಳಿರುವ, ವಿಷಯವೆಂಬ ತಿಮಿಂಗಿಲಗಳಿಂದ ವಿಷಮವಾದ, ಅಪಾರ ಸಂಸಾರ ಸಾಗರವನ್ನು ದೂರಮಾಡುವುದರಲ್ಲಿ ಸಪ್ತಸಾಗರ ಜಲವನ್ನು ಪಾನಮಾಡಿ, ವಿಂಧ್ಯಗಿರಿಯನ್ನು ಮಲಗಿಸಿ, ಖ್ಯಾತನಾದ ಅಗಸ್ತ್ಯಮುನಿಯಂ

ತಿದ್ದನೋ ಅಂತರಂಗದಲ್ಲಿ ಶಿವಜ್ಞಾನಿಯಾಗಿ ಮಹೇಶ್ವರನ ಸನ್ನಿಧಿಯಲ್ಲಿ ನಂದೀಶ್ವರನಂತಿರುವ ಬಸವೇಶನನ್ನು ಯಾರು ಹೊಗಳಿಯಾರು? ಈ ಮಹಾತ್ಮನನ್ನು ಎಷ್ಟು ಪ್ರಶಂಸೆಮಾಡಿದರೂ ಅಲ್ಪವೇ ಎಂದು ಭಾವ.

## ಉತ್ಕಲಿಕ

ನಿರತಿಶಯ ಜನದುರಿತ ನಿರಸನ ನಿಪುಣ ಚರಿತ
ಘನವಿಷಯ ರಸವಿಮುಖ ಸನಕ ಶುಕ ಜನಕ ಮುಖ
ಸಕಲಯಮಿ ಜನವಿಮಲ ವಿಕಸಿತ ಹೃದಯ ಕಮಲ
ಪರಿಕಲನ ಮಧುಕರಂ ಶರಣಜನ ಶಿವಕರಮ್ ||೮||

ಟೀಕಾ–ನಿರತಿಶಯ-ಅತ್ಯಧಿಕವಾಗಿರುವ, ಜನದುರಿತ-ಜನರ ಪಾಪಗಳನ್ನು, ನಿರಸನ-ದೂರಮಾಡುವ ಕಾರ್ಯದಲ್ಲಿ-ನಿಪುಣ-ಸಮರ್ಥವಾದ, ಚರಿತ-ಗುಣಶೀಲಗಳಿಂದ ಕೂಡಿದವನೂ, ಮತ್ತು ಘನ ವಿಷಮವೂ ಅಗಾಧವೂ ಆದ, ವಿಷಯರಸ-ಪುಷ್ಪ ಚಂದನ ವನಿತಾದಿ ವ್ಯಾಮೋಹದ ಅಭಿರುಚಿಯಲ್ಲಿ, ವಿಮುಖ-ಹಿಮ್ಮುಖರಾದ ಯಾವ, ಸನಕ-ಬ್ರಹ್ಮಮಾನಸಪುತ್ರನಾದ ಸನಕಋಷಿಯೇನು, ಶುಕ-ಶುಕಋಷಿಯೇನು, ಹಾಗೂ ಜನಕ-ರಾಜರ್ಷಿಯಾದ ಜನಕನೇನು ಇವರೇ ಮುಂತಾದ, ಸಕಲ-ಸಮಸ್ತರಾದ, ಯಮಿಜನ-ಸಂಯಮಶೀಲರಾದ ಯತಿಗಳ, ವಿಮಲ-ದೋಷವಿಲ್ಲದೆ ನಿರ್ಮಲವಾದ, ಮತ್ತು ವಿಕಸಿತ-ವಿಕಾಸಹೊಂದಿದ, ಹೃದಯ-ಹೃದಯವೆಂಬ, ಕಮಲ-ತಾವರೆಯಲ್ಲಿ, ಪರಿಕಲನ-ಸಂಚರಿಸುವ ಕಾರ್ಯದಲ್ಲಿ, ಮಧುಕರಂ-ಭ್ರಮರದೋಪಾದಿಯಲ್ಲಿರುವ, ಶರಣಜನ-ಶಿವಶರಣ ಸಮೂಹಕ್ಕೆ, ಶಿವಕರಂ-ಸುಖ ಶಾಂತಿಯನ್ನುಂಟು ಮಾಡುವನಾದ ಬಸವಾಮಾತ್ಯಂ ಕಿಂಲಚಕ್ಷ್ಮಹೇ?–ಎಂದು ಮೊದಲಿನಂತೆಯೇ ಅರ್ಥ.

ಭಾವಾರ್ಥ—ಅಸಂಖ್ಯಾತಗಳಾದ ಮಾನವರ ಪಾಪಕರ್ಮಗಳನ್ನು ದೂರಮಾಡುವುದರಲ್ಲಿ ಸಮರ್ಥವಾದ ಪುಣ್ಯಚಾರಿತ್ರವುಳ್ಳವನಾಗಿಯೂ, ಪರಕ್ಕೆ ವಿರೋಧಿಯಾಗಿರುವಕಾರಣ ಪುಷ್ಪ ಚಂದನ ವನಿತಾದಿ ವಿಷಯಸುಖದಲ್ಲಿ ವೈರಾಗ್ಯವನ್ನು ತಳೆದು, ಪರತತ್ತ್ವವನ್ನು ಕಾಣುವುದರಲ್ಲಿ, ಆಸಕ್ತರಾದ ಸನಕ, ಶುಕ, ಜನಕ ಮೊದಲಾದ ಬ್ರಹ್ಮರ್ಷಿ, ಮಹರ್ಷಿ, ರಾಜರ್ಷಿಗಳಾದ ಸಕಲ

ಮುನಿಪುಂಗವರ ನಿರ್ಮಲವಾದ ಹೃದಯ ಕಮಲದಲ್ಲಿ ವಿಹರಿಸುವುದರಿಂದ ಭ್ರಮರಸದೃಶನೂ, ಮಾಹೇಶ್ವರ ಪ್ರಮಥ ಗಣಕ್ಕೆ ಸುಖಶಾಂತಿಯನ್ನುಂಟು ಮಾಡುವನೂ ಆದ, ಶ್ರೀ ಬಸವೇಶ್ವರನನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ.

ಇಷ್ಟಲ್ಲದೆ ಕವಿಯು ಬಸವೇಶನ ಪವಾಡ ಚಾರಿತ್ರ್ಯಕ್ಕೆ ಮುಗ್ಧನಾಗಿ ಆತನನ್ನು ತೃತೀಯಾ ವಿಭಕ್ತಿಯಲ್ಲಿ ಶಾ. ವಿ. ವೃತ್ತದಲ್ಲಿ ಸ್ತೋತ್ರಮಾಡಲು ಉಜ್ಜುಗಿಸಿದ್ದಾನೆ.

## ತೃತೀಯಾ ವಿಭಕ್ತಿಃ

ಆಸ್ಥಾನೇ ಶಿವನಾಗಸಂಯಮಿ ಕರದ್ವಂದ್ವಾಂಗುಳಿಶ್ರೇಣಿಕಾ
ಲೀಲಾಲಾಲನಮಂಥನಾದಜನಯತ್ ಯಃ ಕ್ಷೀರಧಾರಾವಳಿಮ್
ತೇನಾತ್ಯದ್ಭುತಕರ್ಮಕರ್ಮಠ ಮಹಾಮಾಹಾತ್ಮ್ಯ ವರ್ಧಿಷ್ಣುನಾ
ಭಾಂಡಾಗಾರ ಧುರಂಧರೇಣ ಬಸವಾಮಾತ್ಯೇನ ಕಃ ಸ್ಪರ್ಧತೇ? ।।೯।।

ಟೀಕಾ—ಆಸ್ಥಾನೇ-ಬಿಜ್ಜಳರಾಜನ ಓಲಗದಲ್ಲಿ, ಯಃ-ಮುಖ್ಯಮಂತ್ರಿಯಾದ ಯಾವ ಬಸವೇಶ್ವರನು, ಶಿವನಾಗ-ಶಿವನಾಗಯ್ಯನೆಂಬ, ಸಂಯಮಿ-ಜಿತೇಂದ್ರಿಯನ, ಕರದ್ವಂದ್ವ-ಎರಡು ಕೈಗಳಲ್ಲಿನ, ಅಂಗುಳಿ ಶ್ರೇಣಿಕಾ-ಬೆರಳುಗಳಪಂಕ್ತಿಗಳನ್ನು, ಲೀಲಾ-ಕ್ರೀಡೆಯಿಂದ, ಲಾಲನ-ಸ್ಪರ್ಶನಮಾಡುವಿಕೆಯೆಂಬ, ಮಂಥನ-ಘರ್ಷಣೆಯಿಂದ, ಕ್ಷೀರ-ಹಾಲಿನ, ಧಾರಾವಳಿಂ-ಹನಿಯಸಾಲನ್ನು ಅಜನಯತ್-ಹೊರಡಿಸಿದ್ಧನೋ, ತೇನ-ಅಂತಹ ಪ್ರಸಿದ್ಧನಾದ, ಅತ್ಯದ್ಭುತಕರ್ಮ-ಅತ್ಯಾಶ್ಚರ್ಯಕರವಾದ ಕಾರ್ಯವನ್ನು ಮಾಡುವುದರಿಂದ, ಕರ್ಮಠ-ಕ್ರಿಯಾಸಕ್ತರ, ಮಹಾಮಹಾತ್ಮ್ಯ-ಅಧಿಕವಾದ ಮಹಿಮೆಯನ್ನು, ವರ್ಧಿಷ್ಣುನಾ—ವೃದ್ಧಿಗೊಳಿಸುವ ಶೀಲವುಳ್ಳ, ಭಾಂಡಾಗಾರ-ಕೋಶಗೃಹದಲ್ಲಿ ಧುರಂಧರೇಣ-ದಕ್ಷನಾದಂಥ, ಬಸವಾಮಾತ್ಯೇನ-ಪ್ರಮುಖ ಮಂತ್ರಿಯಾದ ಬಸವೇಶ್ವರನ, ಸಹ-ಒಡನೆ, ಕಃ-ಯಾವನುತಾನೇ, ಸ್ಪರ್ಧತೇ-ಈರ್ಷೆಯನ್ನು ತೋರಿಸಿಯಾನು? ಯಾರೂ ಇಲ್ಲವೆಂದು ತಾತ್ಪರ್ಯ.

ಭಾವಾರ್ಥ:—ಬಿಜ್ಜಳನ ಸಭಾಸ್ಥಾನದಲ್ಲಿ ಬಸವೇಶ್ವರನು ಶಿವನಾಗಯ್ಯನೆಂಬ ಶರಣನೊಡನೆ ಸ್ಪರ್ಶಾದಿ ಸಂಬಂಧವನ್ನು ಮಾಡಿರುವನೆಂದು

ಪಿಶುನರು ರಾಜನಿಗೆ ಚಾಡಿ ಹೇಳಿದಾಗ, ಬಸವೇಶ್ವರನು ಶಿವನಾಗ ಶರಣನು ಅವತಾರ ಪುರುಷನಾದುದರಿಂದಲೂ, ಶಿವಕಲಾಯೋಜನ ರೂಪವಾದ ಶಿವಮಾಹೇಶ್ವರ ದೀಕ್ಷೆಯಿಂದ ಆಣವಾದಿ ಮಲತ್ರಯಗಳನ್ನು ಕಳೆದುಕೊಂಡು, ಶಿವಲಿಂಗಧಾರಿಯಾಗಿ ಪವಿತ್ರ ದೇಹಿಯಾಗಿರುವುದರಿಂದಲೂ, ಆತನ ದೇಹವು ಕೇವಲ ರಕ್ತಮಾಂಸಾದಿ ಧಾತುಗಳಿಂದಕೂಡಿರದೆ ಮಂತ್ರಮಯವಾಗಿರುವುದೆಂದು ವಾದಿಸಲು, ಆಗ ಪ್ರತಿವಾದಿಗಳು ಅದು ತೋರಿಕೆಯಾದರೆ ರಕ್ತಮಾಂಸವಿಲ್ಲದಂತೆ ತೋರಿಸೆಂದು ಪ್ರತಿಭಟಿಸಿದಾಗ ಬಸವೇಶನು ಶಿವನಾಗಯ್ಯನೆಂಬ ಯತಿಯ ಕೈಬೆರಳುಗಳನ್ನು ಬಹುಸೂಕ್ಷ್ಮವಾಗಿ ತನ್ನ ಕೈಯಿಂದ ಸ್ಪರ್ಶಿಸಿ, ಅವುಗಳಿಂದ ಹಾಲಿನ ಧಾರೆಯನ್ನು ಸುರಿಸಿದನು. ಅಂತಹ ಅತ್ಯಾಶ್ಚರ್ಯಕರ ವಾದಕಾರ್ಯವನ್ನು ಮಾಡಿ ಸದಾಚಾರಪರರಾದ ಶಿವಭಕ್ತರ ಪ್ರಭಾವವನ್ನು ಹೆಚ್ಚಿಸಿದವನೂ, ಭಂಡಾರಕಾರ್ಯದಲ್ಲಿ ಚತುರಮತಿಯೂ, ಆದ ಬಸವೇಶನ ಜೊತೆಯಲ್ಲಿ ಯಾರುತಾನೇ ಸ್ಪರ್ಧೆಯನ್ನು ಮಾಡಿಯಾರು ? ಎಂದರೆ ಯಾರೂ ಮಾಡಲಾರರೆಂದು ಭಾವ

ಕಳಿಕ ತುರಗವಲ್ಗನ ರಘಟ

ಅಪಿಚ ನಿಗಮಸಾರ ಭೂತ ವೀರಶೈವ ದೀಕ್ಷಿತೇನ
ತಪನ ಶತಸಹಸ್ರA ಸದೃಶ ದೇಹ ದೀಪ್ತಿ ಲಕ್ಷಿತೇನ
ಖಂಡಿತ ಪ್ರಸೂನ ವಿಶಿಖ ಚಾಪ ದಂಡ ಲಸ್ತಕೇನ
ಮಂಡಿತಾನುಭಾವ ಶರಣ ಚರಣ ಕಲಿತ ಮಸ್ತಕೇನ
ವಿದಳಿತ ಪ್ರಚಂಡ ವಿವಿಧ ವಿಷಮ ವಿಷಯ ಗರ್ಜಿತೇನ
ಹೃದಯ ವಿವರ ನಿವಸನ ಪ್ರಗಾಢ ಲೌಲ್ಯವರ್ಜಿತೇನ
ನೀಲಗಳವಿಶಿಷ್ಟ ಭಕ್ತಭವನ ಪುಷ್ಯದಿಂದಿರೇಣ
ಭಾಲನಯನ ವಿಮಲ ಹೃದಯ ಕಮಲ ಮಧ್ಯಮಂದಿರೇಣ॥ ॥೧೦॥
॥ಬಸವಾಮಾತ್ಯೇನ ಕಃಸ್ಪರ್ಧತೆ?

A ಕೋಟ- ವ್ಯಾ. ಪಾ.

ಟೀಕಾ- ಅಪಿಚ- ಮತ್ತು, ನಿಗಮ- ನಿಗಮುಗಳೆಂದು ಖ್ಯಾತಿಪಡೆದಿರುವ ವೇದಾಗಮುಗಳಲ್ಲಿ, ಸಾರ ಭೂತ- ಶ್ರೇಷ್ಠ ರೂಪವಾಗಿರುವ, ವೀರಶೈವ- ನಿಗಮಾಗಮುಗಳಲ್ಲಿ ಉಕ್ತವಾಗಿರುವ ಶಿ ವಾ ದ್ವೈ ತ ವೆಂ ದು ಹೇಳುವ ಮಾಹೇಶ್ವರ ವೀರಶೈವ ಮತ ಸಂಬಂಧಿಯಾಗಿರುವ, ದೀಕ್ಷಿತೇನ- ದೀಕ್ಷೆಯಿಂದ ಕೂಡಿದ "ದೀ ಯ ತೇ ಪರಮಂಜ್ಞಾನಂ ಕ್ಷೀಯತೇಚ ಮಲತ್ರಯಂ" ಎಂದರೆ ಕರ್ಮವನ್ನು ನಾಶಮಾಡಿ ಜ್ಞಾನವನ್ನು ಬೋಧಿಸುವ ಶಿವಕಲಾ ಯೋಜನಾ ವೇಧ, ಮನು, ಕ್ರಿಯೆ ಎಂಬ ಕ್ರಿಯಾ ಮಂತ್ರ- ನಾತ್ಮಕವಾದ ದೀಕ್ಷೆಯನ್ನು ಹೊಂದಿದ, ತಪನ ಶತಸಹಸ್ರ- ನೂರಾರು ಸೂರ್ಯರಿಗೆ- ಸದೃಶ ಸಮಾನವಾದ ದೇಹ- ಶರೀರದ, ದೀಪ್ತಿ-ಕಾಂತಿಯಿಂದ, ಲಕ್ಷಿತೇನ- ಕೂಡಿರುವ, ಖಂಡಿತ- ನಾಶಗೊಳಿಸಿದ, ಪ್ರಸೂನ ವಿಶಿಖ- ಸಂಮೋಹನವೇ ಮೊದಲಾದ ಪಂಚ ಪುಷ್ಪ ಬಾಣ ಸಹಿತನಾದ ಕಾಮನ, ಚಾಪದಂಡ- ಬಿಲ್ಲಿನ, ಲಸ್ತಕೇನ-ಮಧ್ಯಭಾಗವುಳ್ಳಂಥ, ಮಂಡಿತ- ಉತ್ತಮವಾದ ಅನುಭಾವ- ಅನುಭಾವದಿಂದ ಕೂಡಿದ, ಶರಣ- ಮಾಹೇಶ್ವರರ ಚರಣ ಶ್ರೀಪಾದಗಳಲ್ಲಿ, ಕಲಿತ- ಆಸಕ್ತವಾಗಿರುವ, ಮಸ್ತಕೇನ- ಶಿರದಭಾಗವುಳ್ಳ, ವಿದಳಿತ- ನಾಶಗೊಳಿಸಿದ, ಪ್ರಚಂಡ- ಭಯಂಕರವೂ, ವಿಷಮು- ಬಿಡಲಶಕ್ಯವೂ ಆದ, ವಿಷಯ-ಶಬ್ದಾದಿಗಳ, ಗರ್ಜಿತೇನ- ಗರ್ಜನೆಯುಳ್ಳ, ಹೃದಯ ವಿವರ- ಹೃದಯ ಮಧ್ಯದಲ್ಲಿ ನಿವಸನ- ವಾಸ ಮಾಡುವ ಕಾರಣ, ಪ್ರಗಾಢ- ಅಧಿಕವಾದ ಲೌಲ್ಯ- ಚಂಚಲ ಸ್ವಭಾವವನ್ನು ವರ್ಜಿತೇನ- ಬಿಟ್ಟಂಥ, ನೀಲ- ಗಳ- ನೀಲವಾದ ಕಂಠದಿಂದ ವಿಶಿಷ್ಟ- ಕೂಡಿದ ಅರ್ಥಾತ್ ನೀಲಕಂಠದಿಂದ ಕೂಡಿದ ಶ್ರೀಲಕಂಠ ಶಿವನ, ಭಕ್ತ-ಭಕ್ತರ ಭವನ-ಮನೆಗಳಲ್ಲಿ, ಪುಷ್ಯತ್-ಅಭಿವೃದ್ಧಿಯನ್ನು ಹೊಂದುವ, ಇಂದಿರೇಣ- ಲಕ್ಷ್ಮಿಯನ್ನು ಪಡೆದಿರುವ, ಭಾಲನಯನ-ಹಣೆಯಲ್ಲಿ ಕಣ್ಣುಳ್ಳ ಈಶ್ವರನ, ವಿಮಲ- ಶುದ್ಧವಾದ, ಹೃದಯ ಕಮಲ- ಕಮಲಕ್ಕೆ ಸಮವಾದ ಹೃದಯದ, ಮಧ್ಯ- ಮಧ್ಯವೇ, ಮಂದಿರೇಣ- ಮನೆಯಾಗಿರುವ ಬಸವಾಮಾತ್ಯೇನ ಕಃ ಸ್ಪರ್ಧತೆ? ಎಂದು ಮೊದಲಿನಂತೆಯೇ ಅರ್ಥ.

ಭಾವರ್ಥಃ- ನಿಗಮಾಗಮುಗಳಲ್ಲಿ ಹೇಳಿರುವ ಶ್ರೀಶಿವಾದ್ವೈತ ಮತದ ಮಾಹೇಶ್ವರ ದೀಕ್ಷೆಯನ್ನು ಹೊಂದಿದವನೂ, ಅನೇಕ ಸೂರ್ಯ

ತೇಜಸ್ಸಿನಂತೆ ದೇಹಕಾಂತಿಯುತನೂ, ಸಂಮೋಹನಾದಿ ಪಂಚಪುಷ್ಪ ಬಾಣನೆಂದು ವಿಖ್ಯಾತನಾದ ಕಾಮನನ್ನು ಜಯಿಸಿ ಈಶ್ವರನನ್ನು ಭಜಿಸುವವನೂ, ನಿರ್ಮಲ ಶಿವಜ್ಞಾನಿಗಳಾದ ಮಾಹೇಶ್ವರರ ಶ್ರೀಪಾದಗಳನ್ನು ತನ್ನ ಮಸ್ತಕದಿಂದ ನಮಸ್ಕರಿಸುವನೂ, ಪ್ರಚಂಡಗಳೂ ದುಃಖಕರಗಳೂ ಆದ ಶಬ್ದಾದಿ ವಿಷಯಗಳನ್ನು ತ್ಯಜಿಸಿದವನೂ, ಹೃದಯದಲ್ಲಿರುವ ಚಂಚಲತೆಯನ್ನು ಬಿಟ್ಟಿರುವವನೂ; ಶಿವಭಕ್ತರಿಗಾಗಿ ತನ್ನ ಐಶ್ವರ್ಯವನ್ನು ದಾನಮಾಡಿದವನೂ, ಪರಮೇಶ್ವರನ ವಿಶುದ್ಧವಾದ ಪ್ರೀತಿಗೆ ಪಾತ್ರನೂ ಆದ ಬಸವೇಶನನ್ನು ಯಾರು ವಿಾರಿಸಿಯಾರು ? ಸಾಧ್ಯವಿಲ್ಲವೆಂದರ್ಥ.

## ಉತ್ಕಳಿಕ

ಯಾವನಾಳ- ರಾಶಿ ನಿ[A]ಹಿತ- ಭೂವಿನುತ ಕಟಾಕ್ಷಮಹಿತ
ಶಕ್ತಿವೈಭವಾಭಿಜಾತ ಮೌಕ್ತಿಕ ಪ್ರದಾನ ನೀ[B]ತ
ಸಾಂಗ ಭಕ್ತ ವೃಷಭ ನಿತ್ಯ ರಂಗವಲ್ಲಿ[C] ನಿಯಮ ಕೃತ್ಯ
ದೃಷ್ಟ ಸಾದ್ಭುತ ಕ್ರಮೇಣ ದುಷ್ಟದಳನ ವಿಕ್ರಮೇಣ|| ||೧೧||

ಟೀಕಾ—ಯಾವ ನಾಳ-ಜೋಳದ, ರಾಶಿ-ರಾಶಿಯ ಮೇಲೆ, ನಿಹಿತ-ಇಟ್ಟಂಥ, ಭೂ- ಭೂಮಿಯಲ್ಲಿ, ವಿನುತ- ಹೆಸರಾದ, ಕಟಾಕ್ಷ-ಕೃಪಾದೃಷ್ಟಿಯಿರುವುದರಿಂದ, ಮಹಿತ—ಉತ್ತಮವಾದ, ಶಕ್ತಿ ವೈಭವ- ಸಾಮರ್ಥ್ಯ ವೈಭವದಿಂದ, ಅಭಿಜಾತ-ನೂತನವಾದ, ಮೌಕ್ತಿಕ- ಮುತ್ತುಗಳನ್ನು, ದಾನ—ಕೊಡುವುದರಿಂದ, ನೀತ-ಒಯ್ದಂಥ, ಸೆಳೆದ, ಸಾಂಗ—ಪುತ್ರಾದಿ ಕುಟುಂಬ ಸಹಿತರಾದ, ಭಕ್ತವೃಷಭ-ಶ್ರೇಷ್ಠರಾದ ಭಕ್ತರು, ನಿತ್ಯ ಯಾವಾಗಲೂ ಮಾಡುವ, ರಂಗವಲ್ಲಿ-ರಂಗವಲ್ಲಿಯ, ನಿಯಮಕೃತ್ಯ-ನಿಯಮಗಳಕಾರ್ಯಗಳಿಂದ ಎಂದರೆ-ರಾಜಮಾರ್ಗಗಳಲ್ಲಿಯೂ ಸಂಗಮೇಶ್ವರನ ದೇವಾಲಯದಲ್ಲಿಯೂ ಭಕ್ತರು ಮಾಡುತ್ತಿದ್ದ ಸಾರಣೆ ರಂಗವಲ್ಲಿ ಕಾರ್ಯಗಳಿಂದ, ದೃಷ್ಟ-ನೋಡಿದಂಥ, ಸಾದ್ಭುತಕ್ರಮೇಣ—ಆಶ್ಚರ್ಯಕರವಾದ ಕ್ರಮದಿಂದ ಕೂಡಿದ, ದುಷ್ಟ-

A. ವಿ.ವ್ಯೆ.ಪಾ. B. ನಿಹಿತ ವ್ಯೆ-ಪಾ. C. ವಲ್ಲ್ಯ.ವ್ಯೆ. ಪಾ.

ನೀಚರನ್ನು, ದಳನ-ನಿಗ್ರಹಿಸತಕ್ಕ, ವಿಕ್ರಮೇಣ-ಸಾಮರ್ಥ್ಯದಿಂದ ಕೂಡಿದ, ಬಸವಾಮಾತ್ಯೇನ ಕಃಸ್ಪರ್ಧತೇ! ಎಂದು ಮೊದಲಿನಂತೆಯೇ ಅನ್ವಯ.

ಭಾವಾರ್ಥ:- ಬಸವೇಶನು ಜೋಳದ ರಾಶಿಯ ಮೇಲೆ ತನ್ನ ಕಟಾಕ್ಷ- ದೃಷ್ಟಿಯನ್ನು ಇಡಲಾಗಿ ಜೋಳಗಳೆಲ್ಲವೂ ಮುತ್ತುಗಳಾದುವು. ಅಂತಹ ಮುತ್ತುಗಳನ್ನು ಶಿವಭಕ್ತರಿಗೆ ಕೊಟ್ಟದ್ದರಿಂದ ಕುಟುಂಬ ಸಹಿತರಾದ ಆ ಭಕ್ತೋತ್ತಮರು ಯಾವಾಗಲೂ ರಾಜಮಾರ್ಗದಲ್ಲಿಯೂ, ಸಂಗಮೇಶನ ದೇವಾಲಯದಲ್ಲಿಯೂ ಸಹ, ಸಾರಣೆ ರಂಗವಲ್ಲಿಗಳಿಂದ ಅಲಂಕರಿಸುತ್ತಿದ್ದರು. ಆದರಿಂದ ಬಸವೇಶನ ಮಾಹಾತ್ಮ್ಯೆಯು ವ್ಯಕ್ತವಾಗುತ್ತಿತ್ತು. ಮುತ್ತು ದುಷ್ಟರು ತಾವಾಗಿಯೇ ದೂರವಾಗುತ್ತಿದ್ದರು.

ಇನ್ನುಮುಂದೆ ಕವಿಯು ಚತುರ್ಥಿಯಲ್ಲಿ ಬಸವೇಶನನ್ನು ಶಿವಾಭಾವನೆಯಿಂದ ನುತಿಸಿರುತ್ತಾನೆ.

## ಚತುರ್ಥೀ ವಿಭಕ್ತಿಃ

ಶಾ.೨|| ವೇದಾಂತೋದಿತ ವೀರಶೈವ ಸಮಯಾಚಾರ ವ್ರತಪ್ರಕ್ರಿಯಾ
ಚರ್ಯಾದೇಶಿಕ ಸಾರ್ವಭೌಮ ಮಹಿಮಭ್ರಾಜಿಷ್ಣವೇಜಿಷ್ಣವೇ
ಭಾಂಡಾಗಾರಧುರಂಧರಾಯ ಬಸವಾಮಾತ್ಯಾಯ ಚೇತಸ್ಸದಾ
ಜಾಗ್ರತ್ಕೂಡಲಸಂಗಮೇಶ್ವರ ಮಹಾದೇವಾಯ ತಸ್ಮೈನಮಃ||

ಟೀಕಾ–ವೇದಾಂತೋದಿತ-ಆಗಮೋಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ, ವೀರಶೈವಸಮಯ-ವೀರರಾದ ಮಾಹೇಶ್ವರರ ಶಿವಪಾರಮ್ಯಧರ್ಮದ, ಆಚಾರವ್ರತ ಪ್ರಕ್ರಿಯಾ-ಆಚಾರಾದಿ ಕ್ರಮಗಳ, ಚರ್ಯಾ-ಆಚರಣೆಯಲ್ಲಿ, ದೇಶಿಕ ಸಾರ್ವಭೌಮ-ಆಚಾರ್ಯಶ್ರೇಷ್ಠರ, ಮಹಿಮ–ಮಹತ್ವಗಳಿಂದ, ಭ್ರಾಜಿಷ್ಣವೇ-ಪ್ರಕಾಶಮಾನನಾದಂಥ, ಜಿಷ್ಣವೇ–ಜಯಶೀಲನಾದ, ಭಾಂಡಾಗಾರ ಧುರಂಧರಾಯ-ಭಂಡಾರ ಗೃಹಕಾರ್ಯದಲ್ಲಿ ದಕ್ಷನಾದಂಥ, ಚೇತಃ–ಚಿತ್ತದಲ್ಲಿ, ಸದಾ-ಯಾವಾಗಲೂ, ಜಾಗ್ರತ್-ಸ್ಫುರಿಸುತ್ತಿರುವ, ಸಂಗಮೇಶ್ವರ-ಸಂಗಮೇಶ್ವರನೆಂಬ, ಮಹಾದೇವಾಯ-ಮಹೇಶ್ವರನುಳ್ಳಂಥ, ಸಂಗಮೇಶ್ವರ

---

A. ಲಿ. ಪಾ.

ನಲ್ಲಿ ಧ್ಯಾನಾಸಕ್ತನಾದ, ತಸ್ಮೈ-ಆ ಪ್ರಸಿದ್ಧನಾದ, ಬಸವಾಮಾತ್ಯಾಯ-ಮಂತ್ರೀಶ್ವರನಾದ ಬಸವೇಶನಿಗೆ, ನಮಃ-ನಮಸ್ಕಾರವು. ||೧೨||

ಭಾವಾರ್ಥ:- ವೇದಾಗಮೋಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಶಿವಾದ್ವೈತಮತದ ಪವಿತ್ರ ಶಿವಪೂಜೆ, ಶಿವವ್ರತ, ಶಿವಧ್ಯಾನಾದಿ ಧರ್ಮಗಳನ್ನು ಸ್ವಯಂ ಆಚರಿಸುವುದರಲ್ಲಿಯೂ, ಬೋಧಿಸುವುದರಲ್ಲಿಯೂ ಆಚಾರ್ಯ ಶ್ರೇಷ್ಠರಂತೆ ಮಹತ್ವಶಾಲಿಯಾಗಿಯೂ, ಬಿಜ್ಜಳರಾಜನ ಭಾಂಡಾಗಾರ ಕಾರ್ಯದಲ್ಲಿ ಧುರಂಧರನಾಗಿಯೂ, ಯಾವಾಗಲೂ ತನ್ನ ಚಿತ್ತದಲ್ಲಿ ಸಂಗಮೇಶ್ವರ ನಾಮಕನಾದ ಮಹೇಶ್ವರನ ಧ್ಯಾನಾಸಕ್ತನೂ, ಮಂತ್ರೀಶ್ವರನೂ ಆಗಿಯೂ ಬೆಳಗುತ್ತಿದ್ದ ಬಸವೇಶನಿಗೆ ಪ್ರಣಾಮಗಳೆಂದು ಸುಲಲಿತಶೈಲಿಯಲ್ಲಿ ಕವಿಯು ಚತುರ್ಥೀ ವಿಭಕ್ತಿಯಲ್ಲಿ ಸ್ತುತಿಸಿರುತ್ತಾನೆ.

ಕಳಿಕ ಹರಿಗತಿ ರಘಟೆ

ಅಪಿಚಗೌತಮ ಕಣಾದ ಕುಂಭಜ ಚ್ಯವನಮುಖ್ಯಮುನಿ[A] ಚಿತ್ತಸದ್ಮನೇ
ತಪನವಹ್ನಿ ಹಿಮಭಾನುಲೋಚನ ತ್ರಿಪುರವೈರಿಗಣ ಭಾವಿತಾತ್ಮನೇ
ಕರತಲಸ್ಥ[B] ನಿಖಿಲಾಂಡಮಂಡಲ[C] ಪ್ರಕಟಕಂದುಕ ಸದಾ ವಿಹಾರಿಣೇ
ಕರಟಿದೈತ್ಯಘನತುಂಗ ಮಸ್ತಕಕ್ಷರಿತಮೌಕ್ತಿಕ ನಿಕಾಯಹಾರಿಣೇ||೧೩||
ಕುಸುಮ ಬಾಣಶಿತಬಾಣಸಂಹತಿ ಗ್ರಸನಧೀರ ಗುಣಸಾರಶೋಚಿಷೇ
ವಸುಮತೀಪ್ರಮುಖಭೂತಚೇತನಪ್ರದದಯಾಮಯಕಟಾಕ್ಷರೋಚಿಷೇ
ವಿತತಪಾತಕ ಸಮೂಹ ಸಾನು ಮದ್ವಿತತಿ ನಿರ್ದಳನವಜ್ರಬಾಹವೇ
ಶ್ರುತಿಸಮುತ್ಕರಸದಾವಿರೋಧಕೃತ್ಸ್ನಮಯಬೌದ್ಧಮುಖಚಂದ್ರರಾಹವೇ

ಟೀಕಾ- ಅಪಿಚ-ಮತ್ತು, ಗೌತಮ-ನ್ಯಾಯಸೂತ್ರವನ್ನು ವಿರಚಿಸಿದ ಗೌತಮನು, ಕಣಾದ-ವೈಶೇಷಿಕ ಸೂತ್ರಕರ್ತೃವಾದ ಕಣಾದನು, ಹಾಗೆಯೇ ಕುಂಭಜ-ಸಪ್ತಸಮುದ್ರವನ್ನೂ ಪಾನಮಾಡಿದ ಅಗಸ್ತ್ಯನು, ಚ್ಯವನ-ಚ್ಯವನ

---

A. ಲಬ್ಧ ಆ, ಪಾ. ಚಿತ್ತಸತ್ಯಾತ್ಮನೇ-ಸ್ವೈ. ಪಾ.
B. ಲ ಪಾ. C. ಲಿ.-ಪಾ. ಕನಕಕಂದುಕವದ್ವಿಹಾರಿಣೇ ಸ್ವೈ. ಪಾ.

ನನು ಮುಂತಾದ ಮುಖ್ಯಮುನಿ-ಪ್ರಧಾನರಾದ ಮಹರ್ಷಿಗಳ, ಚಿತ್ರ-ಮನವೇ, ಸದ್ಮನೇ-ಗೃಹವಾಗಿರುವ, ತಪನ-ಸೂರ್ಯನು, ವಹ್ನಿ-ಅಗ್ನಿಯು, ಹಿಮಭಾನು-ಶೀತಕಿರಣನಾದ ಚಂದ್ರನು, ಇವರೇ, ಲೋಚನ-ನೇತ್ರವನ್ನಾಗಿಯುಳ್ಳ, ತ್ರಿಪುರ ವೈರಿ-ತ್ರಿಪುರಗಳನ್ನು ಸಂಹರಿಸಿದ ಪರಮೇಶನ ಸಂಬಂಧಿಯಾದ, ಗಣ-ಪ್ರಮಥ ಗಣದಿಂದ, ಭಾವಿತ-ಭಾವಿಸಿದ, ಆತ್ಮನೇ-ಸ್ವರೂಪವುಳ್ಳ, ಕರತಲಸ್ಥ-ಅಂಗೈಯ ಲ್ಲಿರುವ, ನಿಖಿಲ-ಸಮಸ್ತವಾದ, ಅಂಡಮಂಡಲ-ಬ್ರಹ್ಮಾಂಡವೆಂಬ, ಪ್ರಕಟ-ವ್ಯಕ್ತವಾದ, ಕಂದುಕ-ಚೆಂಡಿನಿಂದ, ಸದಾ-ಯಾವಾಗಲೂ, ವಿಹಾರಿಣೆ-ವಿಹರಿಸ ತಕ್ಕ ಶೀಲವುಳ್ಳ, ಕರಟಿದೈತ್ಯ-ಗಜಾಸುರನೆಂಬ ರಾಕ್ಷಸನ, ಘನ-ದೊಡ್ಡದೂ, ತುಂಗ-ಉನ್ನತವೂ ಆದ, ಮಸ್ತಕ-ಕುಂಭಸ್ಥಳದಿಂದ, ಕ್ಷರಿತ-ಸುರಿದಂಥ, ಮೌಕ್ತಿಕ-ಮುತ್ತುಗಳ, ನಿಕಾಯ-ಸಮೂಹವನ್ನು, ಹಾರಿಣೇ-ಹಾರವಾಗಿ ಮಾಡಿಕೊಂಡಿರುವನೂ, ಕುಸುಮ-ಅರವಿಂದಾದಿ ಪುಷ್ಪಗಳೇ, ಬಾಣ-ಅಂಬಾಗಿ ಯುಳ್ಳ ಕಾಮನ, ಶಿತ-ಹದವಾದ, ಬಾಣಸಂಹತಿ-ಬಾಣಸಮೂಹವನ್ನು, ಗ್ರಸನ-ನುಂಗುವಕೃತ್ಯದಲ್ಲಿ, ಧೀರ-ಗಂಭೀರವಾದ, ಗುಣಸಾರ-ಗುಣಗಳ ಸ್ಥಿರಾಂಶದಿಂದ, ಶೋಚಿಷೇ-ಹೊಳೆಯುವ, ವಸುಮತೀ ಪ್ರಮುಖ-ಪೃಥಿವೀ ಮೊದ ಲಾದ, ಭೂತ-ಪಂಚಮಹಾಭೂತಗಳಿಗೆ, ಚೇತನಪ್ರದ ಚೈತನ್ಯವನ್ನುಂಟು ಮಾಡುವ, ದಯಾಮಯ-ಕರುಣಾಪೂರ್ಣವಾದ ಈಶ್ವರನಂತೆ, ಕಟಾಕ್ಷ-ಕಡೆ ಗಣ್ಣಿನ, ರೋಚಿಷೇ-ಕಾಂತಿಯುಳ್ಳ, ವಿತತ-ಬಹುತರಗಳಾದ, ಪಾತಕ-ಪಾಪಗಳ, ಸಮೂಹ-ಸಂತತಿಯೆಂಬ, ಸಾನುಮದ್ವಿತತಿ-ಪರ್ವತ ಶ್ರೇಣಿಯನ್ನು, ನಿರ್ದಳನ-ಸೀಳುವುದರಲ್ಲಿ, ವಜ್ರಬಾಹವೇ-ವಜ್ರಾಯುಧವನ್ನು ತೋಳಿನಲ್ಲಿಹೊಂದಿರುವ ಇಂದ್ರನಂತಿರುವ, ಶ್ರುತಿಸಮುತ್ಕರ-ಋಗಾದಿ ವೇದಸಮೂಹಕ್ಕೆ ಎಂದರೆ ಅದರ ಧರ್ಮಕ್ಕೆ, ಸದಾ-ಯಾವಾಗಲೂ, ವಿರೋಧಕೃತ್-ವಿರೋಧಿಯಾದ, ಸಮಯ-ಮತಸಿದ್ಧಾಂತವುಳ್ಳ, ಬೌದ್ಧಮುಖಗಳ-ಬೌದ್ಧಾದಿಗಳ, ಮುಖ-ಮುಖವೆಂಬ, ಚಂದ್ರ-ಚಂದ್ರಮಂಡಲಕ್ಕೆ, ರಾಹವೇ-ರಾಹುವಿನೋಪಾದಿಯಾದ, ಬಸವಾ ಮಾತ್ಯಾಯ ನಮಃ ಎಂದು ಮೊದಲಿನಂತೆಯೇ ಅರ್ಥವಿರುತ್ತದೆ.

ಭಾವಾರ್ಥ— ಗೌತಮ, ಕಣಾದ, ಅಗಸ್ತ್ಯ, ಚ್ಯವನ, ಮುಂತಾದ ಮುನಿವರ್ಯರು ಸ್ತುತಿಸುತ್ತಿರುವಂಥ! ಸೂರ್ಯ ಚಂದ್ರಾಗ್ನಿಗಳೇ ನೇತ್ರವಾಗಿ

ರುವ ಮಹೇಶನ ಸದಸ್ಯರಾದ ಪ್ರಮಥರಿಂದ ಭಾವಿಸಿದಂಥ, ನಿಜಸ್ವರೂಪಿ ಯಾದ ತನ್ನಜ್ಞಾನಕ್ರಿಯಾರೂಪ-ಸ್ವಾತಂತ್ರ್ಯ ಶಕ್ತಿಗೆ ಅಧೀನವಾದ ಬ್ರಹ್ಮಾಂ ಡಮಂಡಲವೆಂಬ ಚೆಂಡಿನಿಂದ ವಿಹರಿಸುವವನೂ, ಗಜಾಸುರನ ದೊಡ್ಡ ಮತ್ತು ಉನ್ನತವೂ ಆದ ಕುಂಭಸ್ಥಳದಲ್ಲಿದ್ದ ಮುತ್ತುಗಳನ್ನು ಹಾರಮಾಡಿಕೊಂಡಿರುವ ವನೂ, ಅರವಿಂದಾದಿ ಪುಷ್ಪಗಳನ್ನು ಬಾಣವಾಗಿ ಮಾಡಿಕೊಂಡಿರುವ ಕಾಮನ ಶರಗಳನ್ನು ನಾಶಮಾಡಿದಂಥ ತನ್ನ ಶಾಂತ್ಯಾದಿ ಗುಣಗಳಿಂದ ಹೊಳೆಯುವ ವನೂ, ತನ್ನ ಕಟಾಕ್ಷದಿಂದ ಭೂವ್ಯಾದಿ ಪಂಚಮಹಾಭೂತಗಳಿಗೆ ಚೈತನ್ಯ ವನ್ನು ಕೊಡುವ ಈಶ್ವರನಂತೆ ದಯಾಶಾಲಿಯೂ, ವಿಶಾಲವಾದ ಪಾಪರಾಶಿ ಯೆಂಬ ಪರ್ವತಕ್ಕೆ ಇಂದ್ರನಂತಿರುವವನೂ, ವೇದಾಗಮಗಳ ಧರ್ಮಗಳಿಗೆ ವಿರೋಧಿಗಳಾದ ಬೌದ್ಧಾದಿಗಳಿಗೆ ರಾಹುವಂತೆ ಕಾಣುವ ನಂದೀಶನಿಗೆ ಸಮ ನಾದ ಬಸವೇಶನಿಗೆ ನಮಸ್ಕಾರವು.

## ಉತ್ಕಳಿಕ

ರುಚಿರರತ್ನ ಮಹನೀಯ ಹಾಟಕಪ್ರಚುರ ರೂಪಜವ[A]ಸತ್ತ್ವಘೋಟಕ<br>
ತ್ವರಿತಧೂತ ಸೃಣಿಪಾತಧಾರಣ ಕ್ಷರಿತದಾನಜಲ ಗಂಧವಾರಣ<br>
ಪ್ರಥಿತವಸ್ತುಪರಿಷನ್ನಿರಂತರ ಪ್ರದಮಹಾಮಹಿಮಕಾರಣಾಂತರ<br>
ಸ್ಮಿತ ಪರಿಸ್ಫುರಿತ ಭಕ್ತಚೇತಸೇ ಸ್ತುತಿವಚೋಮುದಿತವನ್ದಿರೇತಸೇ ||

ಟೀಕಾ—ರುಚಿರ-ಮನೋಹರಗಳಾದ, ರತ್ನ-ಮಣಿಗಳಿಂದಲೂ, ಶ್ರೇಷ್ಠ ಪದಾರ್ಥಗಳಿಂದಲೂ, ಮಹನೀಯ-ಬೆಲೆಬಾಳುವ ಉತ್ತಮವಾದ, ಹಾಟಕ-ಚಿನ್ನದಿಂದ-ಸುವರ್ಣದಿಂದ, ಪ್ರಚುರ-ವ್ಯಾಪ್ತವಾದ ಮತ್ತು ಹೆಚ್ಚಾದ, ರೂಪ ಜವ-ರೂಪವೇಗಗಳಿರುವ, ಸತ್ತ್ವ-ಸತ್ತ್ವವೆಂಬ, ಘೋಟಕ-ಕುದುರೆಯು ಳ್ಳಂಥ, ಹಾಗೆಯೇ, ತ್ವರಿತ—ಶೀಘ್ರವಾಗಿ, ಧೂತ-ಕಂಪಿಸುತ್ತಿರುವ, ದೋಷ ವಿಲ್ಲದ, ಸೃಣಿಪಾತ-ಅಂಕುಶದ ಬೀಳುವಿಕೆಯನ್ನು, ಅಂಕುಶ-ಮುದ್ರೆಯನ್ನು, ಧಾರಣ-ಧರಿಸುವುದರಿಂದ, ಸಂಪರ್ಕದಿಂದ, ಕ್ಷರಿತ-ಸುರಿದ, ನಾಶವಾದ, ದಾನ ಜಲ-ಮದೋದಕದಿಂದ ಕೂಡಿದ, ಗಂಧವಾರಣ-ಮದಮತ್ತವಾದ ಆನೆಯು

---

A. ತತ್ತ್ವ-ಪಾ.

ಳ್ಳಂಥ, ಹಾಗೂ ವಾಸನಾರೂಪ ಗಜವುಳ್ಳ, ಅಂತೆಯೇ,ಪ್ರಥಿತ-ಪ್ರಸಿದ್ಧಗಳಾದ, ವ್ಯಕ್ತಗಳಾದ,ವಸ್ತುಪರಿಷತ್-ಪದಾರ್ಥಗಳ ಸಮೂಹವನ್ನು, ನಿರಂತರ ಯಾವಾಗಲೂ, ಪ್ರದ-ಕೊಡುವುದರಿಂದ, ಮಹಾಮಹಿಮ-ಅಧಿಕವಾದ ಮಹಿಮೆಯುಳ್ಳವನೂ, ಕಾರಣಾಂತರ-ಕಾರಣಾಂತರವಾಗಿ ಯಾವಾಗಲಾದರೂ ಉಂಟಾದ, ಸ್ಮಿತ-ಮಂದಹಾಸದಿಂದ, ಪರಿಸ್ಫುರಿತ-ಅತ್ಯಂತ ವಿಕಾಸಗೊಳಿಸಿದ, ಭಕ್ತಚೇತಸೇ-ಭಕ್ತಜನರ ಅಂತಃಕರಣವುಳ್ಳಂಥವನೂ,ಸ್ತುತಿವಚೋಮುದಿತ-ಸ್ತೋತ್ರ ವಚನಗಳಿಂದ ಸಂತೋಷಗೊಳಿಸಿದ, ವಹ್ನೀಶ್ವರನುಳ್ಳಂಥವನೂ, ಎಂದರೆ ಸ್ತುತಿವಚನಗಳಿಂದ ಶಿವನನ್ನು ತೃಪ್ತಿಪಡಿಸಿದವನೂ ಆದ ಬಸವೇಶನಿಗೆ ನಮಸ್ಕಾರವು. ||೬||

ಭಾವಾರ್ಥ—ಜೀವಿಗಳು ಸ್ವಕರ್ಮವಶದಿಂದ ನಶ್ವರವಾದ ಈ ಜಗತ್ತಿನಲ್ಲಿ ಜನ್ಮತಾಳಿ ಆಶಾಪಾಶಪರವಶರಾಗಿ ಪತ್ನೀಪುತ್ರರ ಮೇಲಣ ವ್ಯಾಮೋಹದಿಂದ ಸುಖದುಃಖಗಳೆಂಬ ದ್ವಂದ್ವದಲ್ಲಿ ಸಿಲುಕಿ, ಕಾಮಾದಿ ಅರಿಷಡ್ವರ್ಗಕ್ಕೆ ಬಲಿಯಾಗಿ, ನಾನಾ ಕ್ಲೇಶಗಳಿಂದ ಕೂಡಿದ ಭವಸಾಗರದಲ್ಲಿ ಮತ್ತೆಮತ್ತೆ ಬಂದು ನರಳುವ ಜೀವಕೋಟಿಗಳ ಉದ್ಧಾರಕ್ಕಾಗಿಯೇ ಶ್ರೀ ನಂದಿಯ ರೂಪವಾಗಿ ಅವತರಿಸಿರುವವನಾಗಿಯೂ, ತನ್ನಆತ್ಮ ತತ್ತ್ವಾನುಭವದಿಂದ ಆಣವಾದಿ ಮಲಗಳು ತೊಲಗಿಹೋದ್ದರಿಂದ ಅಹಂಕಾರ ಮಮಕಾರ ರಹಿತನಾಗಿಯೂ ಅನೇಕ ವಸ್ತುಗಳನ್ನು ಯಾವಾಗಲೂ ದಾನಮಾಡುತ್ತಿರುವವನೂ, ಮಹಿಮಾಶಾಲಿಯೂ ಆಗಿ ಕಾರಣಾಂತರ ಉಂಟಾದ ಮಂದಹಾಸದಿಂದ ಭಕ್ತರ ಚಿತ್ತಕ್ಕೆ ಉತ್ಸಾಹವನ್ನೀಯುವವನೂ, ಶಿವಗೀತದಿಂದ ಸಂಗಮೇಶನನ್ನು ಒಲಿಸಿಕೊಂಡಿರುವವನೂ ಆದ ಬಸವೇಶನಿಗೆ ನಮಸ್ಕಾರವು.

ಇನ್ನು ಕವಿಯು ಬಸವೇಶನನ್ನು ಹೃದಯಂಗಮವಾಗಿ ಬೇರೆರೀತಿಯಾಗಿ ಪಂಚಮೀವಿಭಕ್ತಿಯಲ್ಲಿ ಸ್ತುತಿಸಿರುತ್ತಾನೆ.

### ಪಂಚಮೀವಿಭಕ್ತಿಃ

ಶಾ|| ಚೇತಃ ಕೀಲಿತ ಸಂಗಮೇಶ್ವರ-ಮಹಾದೇವಾಲಿಕ ಪ್ರಸ್ಫುರ
ಜ್ಜ್ವಾಲಾಜಾಲಜಟಾಲ ವಹ್ನಿಶಲಭಾಕಾರ ಪ್ರಸೂನಾಂಬಕಾತ್

ಭಾಂಡಾಗಾರಧುರಂಧರಾತ್ ಬಸವಾಮಾತ್ಯಾ[A]ದಮಾತ್ಯಾವಳೀ
ಚೂಡಾಘೃಷ್ಟಪದಾರವಿಂದಯುಗಳಾತ್ ನೈವಾಪರಂದೈವತಮ್ ॥ ೧೬ ॥

ಟೀಕಾ:- ಚೇತಃ- ಮನಸ್ಸಿನಲ್ಲಿ, ಕೀಲಿತ-ಸಂಲಗ್ನವಾಗಿರುವ, ಸಂಗಮೇಶ್ವರ- ಸಂಗಮನಾಥನೆಂಬ ಹೆಸರಿನ, ಮಹಾದೇವ-ಈಶ್ವರನ, ಆಲಿಕ-ಹಣೆಯಲ್ಲಿ, ಪ್ರಸ್ಫುರತ್-ಜಾಜ್ವಲ್ಯಮಾನವಾದ, ಜ್ವಾಲಾ-ಉರಿಯ, ಜ್ವಾಲ-ಸಮೂಹದಿಂದ, ಜಟಾಲ-ಭಯಂಕರವಾದ, ವಹ್ನಿ-ಬೆಂಕಿಗೆ, ಶಲಭಾಕಾರ-ಪತಂಗದ ಹುಳುವಿನಂತಿರುವ, ಪ್ರಸೂನಾಂಬಕಾತ್-ಕಾಮದೇವನುಳ್ಳಂಥ, ಅಮಾತ್ಯಾವಳೀ-ಮಂತ್ರಿಗಳ ಸ್ತೋಮದ, ಚೂಡಾ-ಶಿರೋಭಾಗದಿಂದ,ಘೃಷ್ಟ-ಘರ್ಷಿಸಿದ ಅರ್ಥಾತ್ ಮುಟ್ಟಿದ, ಪಾದಾರವಿಂದ-ಕಮಲಸಮಾನ ಪಾದಗಳ, ಯುಗಳಾತ್-ದ್ವಯವುಳ್ಳಂಥ,ಭಾಂಡಾಗಾರ-ಅರ್ಥಕೋಶ ಗೃಹದಲ್ಲಿ,ಧುರಂಧರಾತ್-ಒಳ್ಳೆಸಮರ್ಥನಾದಂಥ, ಬಸವಾಮಾತ್ಯಾತ್-ಮಂತ್ರಿಯಾದ ಬಸವೇಶನಿಗಿಂತಲೂ, ಅಪರಂ-ಬೇರೆಯದಾದ, ದೈವತಂ-ದೇವರು, ನೈವಾಸ್ತಿ-ಇರುವುದಿಲ್ಲವಷ್ಟೆ. ॥ ೧೬ ॥

ಭಾವಾರ್ಥ— ತನ್ನ ಹೃದಯಕಮಲದಲ್ಲಿ ಸದಾ ಸನ್ನಿಹಿತನಾಗಿರುವ ಸಂಗಮೇಶ್ವರನೆಂಬ ಮಹಾದೇವನ ಹಣೆಯಲ್ಲಿ ಜ್ವಲಿಸುವ ಪ್ರಚಂಡವಾದ ಅಗ್ನಿಜ್ವಾಲೆಗೆ ಪತಂಗದ ಹುಳುವಿನಂತೆ, ತನಗೆ ಸಂಬಂಧಿಸಿದ ಕಾಮೇಚ್ಛೆಯನ್ನು ಸಮರ್ಪಿಸಿದವನೂ, ಮಂತ್ರಿನಿಕರದ ಶಿರೋಭಾಗದಿಂದ ನಮಸ್ಕರಿಸಿದ ಶ್ರೀಪಾದಗಳುಳ್ಳಂಥವನೂ, ಅರ್ಥಶಾಸ್ತ್ರದಲ್ಲಿ ಮಹಾಪ್ರವೀಣನೂ, ಬಿಜ್ಜಳನಿಗೆ ಮುಖ್ಯಮಂತ್ರಿಯೂ ಆದ ಬಸವೇಶನಿಗಿಂತಲೂ ಪ್ರತ್ಯಕ್ಷವೂ ಅಧಿಕವೂ ಆದ ದೈವವು ಬೇರೊಂದಿಲ್ಲ.

ಕಳಿಕ-ಹರಿಗತಿ ರಘಟೆ

ಅಪಿಚಜಗತ್ತ್ರಯ ಕರ್ಣಸುಧಾರಸ ಕುಲ್ಯಾಂಚಿತಸೂನೃತ ಜಲ್ಪಾಕಾತ್
ಕುಪಿತಾಂತರ್ಗತರಿಪುಷಡ್ವರ್ಗಮಹೋತ್ಕಟ ಮಸ್ತಕತಟಕುಟ್ಟಾಕಾತ್

A. ಸ್ವಪರ್ವಾಪಳೀ ಅ. ಪಾ.

ಪರವನಿತಾಜನ ಭಾಸುರತರಮುಖಮಂಡಲ ವೀಕ್ಷಣವಿಧಿಜಾತ್ಯಂಧಾತ್
ನಿರತಿಶಯಾನುಗ್ರಹಶಿತಖಡ್ಗಲತಾಪರಿಲೂನಪುನರ್ಭವಬಂಧಾತ್ ||೧೭||
ಕನ್ನದಬ್ರAಹ್ಮಾರ್ಯ ಕರುಣಾದುಗ್ಧಾರ್ಣವ ಸಂವರ್ಧನ ರಾಕಾ
ಚಂದ್ರಾತ್
ಕಿನ್ನರಿಬ್ರಂಹಾರ್ಯ ಪುರಹರಗೋಷ್ಠೀ ಸಲ್ಲಪನಾಕರ್ಣನನಿಸ್ತಂದ್ರಾತ್
ಲಾಲಿತಸಕಲಪುರಾತನ ಗಣವಾಙ್ಮಣಿ ಮುಕುರಪ್ರತಿಬಿಂಬಿತರೂಪಾತ್
ಲೀಲಾಲಾಲಸ ರಸಮಣಿಚಂಚಲ ನಯನಾಂಚಲಶಿತವಿಶಿಖದುರಾಪಾತ್ ||
||೧೮||

ಟೀಕಾ–ಅಪಿಚ-ಮತ್ತು ಜಗತ್ರಯ-ಮೂರುಲೋಕದ ಜನರ, ಕರ್ಣ-ಕಿವಿಗಳಿಗೆ, ಸುಧಾರಸ-ಅಮೃತರಸದ, ಕುಲ್ಯಾಂಚಿತ-ಕಾಲುವೆಯಿಂದ ಹೊರ ಸೂಸಿಧ,ಸೂನೃತ–ಸತ್ಯವಚನವನ್ನು,ಜಲ್ಪಾಕಾತ್ ನುಡಿಯುವ ಶೀಲವುಳ್ಳಂಥ ವನೂ, ಕುಪಿತ-ಪ್ರಕುಪಿತಗಳಾಗಿ, ಅಂತರ್ಗತ-ಅಂತರಂಗದಲ್ಲಿರುವ, ರಿಪುಷಡ್ವರ್ಗ–ಕಾಮಕ್ರೋಧಾದಿ ಅರಿಷಡ್ವರ್ಗಗಳ, ಮಹೋತ್ಕಟ-ಅತ್ಯುನ್ನತವಾದ, ಮಸ್ತಕತಟ-ತಲೆಯಮೇಲೆ, ಕುಟ್ಟಾಕಾತ್-ಕುಟ್ಟುವವನೂ, ಪರವನಿತಾಜನ–ಅನ್ಯಸ್ತ್ರೀಯರ, ಭಾಸುರತರ-ಅತಿಸುಂದರವಾದ, ಮುಖಮಂಡಲ- ಮುಖಪ್ರದೇಶಗಳನ್ನು, ವೀಕ್ಷಣ–ನೋಡುವ, ವಿಧಿ-ಕಾರ್ಯದಲ್ಲಿ, ಜಾತ್ಯಂಧಾತ್–ಹುಟ್ಟುಕುರುಡನಾದಂಥ, ನಿರತಿಶಯ-ಅತ್ಯಧಿಕವಾದ, ಅನುಗ್ರಹ-ಪ್ರಸಾದವೆಂಬ, ಶಿತ–ತೀಕ್ಷ್ಣವಾದ, ಖಡ್ಗಲತಾ–ಲತೆಯಂತೆ ಬಳಕುವ ಖಡ್ಗದಿಂದ, ಪರಿಲೂನ-ಕತ್ತರಿಸಿದ, ಪುನರ್ಭವ–ಮತ್ತೆ ಹುಟ್ಟಬೇಕಾದ ಸಂಸಾರವೆಂಬ, ಬಂಧಾತ್-ಪಾಶವುಳ್ಳಂಥ, ಕನ್ನದಬ್ರಹಾರ್ಯ–ಕನ್ನದಕೆಲಸದ ಬ್ರಂಹಯ್ಯನಿಗೋಸ್ಕರ, ಕರುಣಾ–ದಯೆಯೆಂಬ, ದುಗ್ಧಾರ್ಣವ- ಕ್ಷೀರಸಾಗರವನ್ನು, ಸಂವರ್ಧನ-ಹೆಚ್ಚಿಸುವಲ್ಲಿ, ರಾಕಾಚಂದ್ರಾತ್-ಹುಣ್ಣಿಮೆಯ ಚಂದ್ರನಂತಿರುವ, ಕಿನ್ನರಿಬ್ರಂಹಾರ್ಯ–ಕಿನ್ನರಿವಾದ್ಯ ಹಿಡಿದು ಶಿಭಜನೆಯಲ್ಲಿ ತೊಡಗಿದ ಬ್ರಂಹಯ್ಯನಿಂದ, ಪುರಹರಗೋಷ್ಠೀ–ಶಿವಸಂಬಂಧವಾದ ಕಥೆಯನ್ನು, ಆಕರ್ಣನ-ಕೇಳುವುದರಲ್ಲಿ,

A. ಹಯ.ಅ. ಪಾ. ಬೊಮ್ಮಯ_ಪ್ರೆ. ಪಾ.

ನಿಸ್ತಂದ್ರಾತ್-ಆಲಸ್ಯವಿಲ್ಲದಿರುವನೂ, ಲಾಲಿತ-ವಿನೋದಗೊಳಿಸಿದ (ಗೌರವಿಸಿದ) ಸಕಲ-ಸಮಸ್ತರಾದ, ಪುರಾತನಗಣ-ಪ್ರಾಚೀನ (ವೃದ್ಧ) ರಾದ ಮಾಹೇಶ್ವರರ, ವಾಕ್-ವಾಕ್ಯವೆಂಬ, ಮಣಿಮುಕುರ-ಮಣಿಮಯವಾದ ಕನ್ನಡಿಯಲ್ಲಿ, ಪ್ರತಿಬಿಂಬಿತ-ಪ್ರತಿಬಿಂಬಿಸಿದ, ರೂಪಾತ್-ರೂಪಾತಿಶಯವುಳ್ಳಂಥವನಾದರೂ, ಲೀಲಾ-ಭಾವವಿಲಾಸ ಮತ್ತು ಲಾಲಸ-ಆಶೆ, ಇವುಗಳಿಂದ, ರಸಮಣಿ-ಪಾದರಸದ ಮಣಿಯಂತೆ, ಚಂಚಲ-ಚಂಚಲವಾದ, ನಯನಾಂಚಲ-ಸ್ತ್ರೀಯರ ಕಡೆಗಣ್ಣಿನಿಂದ ಹೊರಟ, ಶಿತ-ತೀಕ್ಷ್ಣವಾದ, ವಿಶಿಖ-ಬಾಣಕ್ಕೆ, ದುರಾಪಾತ್-ಸಿಕ್ಕದಿರುವ,ಬಸವಾನ್ಮಾತ್ಯಾತ್ ಅಪರಂ ದೈವತಂ ನೈವ ಎಂದು ಮೊದಲಿನಂತೆಯೇ ಅರ್ಥವಿದೆ.

ಭಾವಾರ್ಥ—ಮರ್ತ್ಯಾದಿ ಮೂರು ಲೋಕದಲ್ಲಿರುವ ಮನುಷ್ಯಾದಿಗಳ ಕಿವಿಗೆ, ಇಂಪಾಗಿ ಅಮೃತ ರಸಪ್ರವಾಹವನ್ನು ಹೊರಸೂಸುವ ಸತ್ಯವಚನವನ್ನು ನುಡಿಯುವವನೂ, ಪ್ರಚಂಡಗಳಾದ ಕಾಮಕ್ರೋಧಾದಿ ಆಂತರಿಕ ಶತ್ರುವನ್ನು ತಲೆಯೆತ್ತದಂತೆ ಬಗ್ಗುಬಡಿಯುವವನೂ, ಪರವನಿತಾ ಜನರ ಸುಂದರವಾದ ಮುಖಮಂಡಲವನ್ನುಅವಲೋಕಿಸುವಲ್ಲಿ ಹುಟ್ಟುಕುರುಡನಂತಿರುವವನೂ, ನಿರತಿಶಯಾನುಗ್ರಹವೆಂಬ ಖಡ್ಗದಿಂದ ಭವಬಂಧನವನ್ನು ನಾಶಮಾಡಲು ಶಕ್ತನೂ, ಕನ್ನಹಾಕಿ ಜೀವಿಸುತ್ತಿದ್ದ ಬ್ರಹ್ಮಯ್ಯನಿಗಾಗಿ "ದಯವಿಲ್ಲದ ಧರ್ಮವದಾವುದಯ್ಯ" ಎಂಬಹಾಗೆ ಅಧಿಕವಾದ ಕರುಣಾಶಾಲಿಯೂ, ಕಿನ್ನರಿ ಬ್ರಹ್ಮಯ್ಯನಿಂದ ಶಿವಲೀಲಾ ಕಥೆಯನ್ನು ಕೇಳುವುದರಲ್ಲಿ ಆಸಕ್ತನೂ, ಸದಾ ಸಂತುಷ್ಟರಾದ ಮಾಹೇಶ್ವರರ ವಚನವೆಂಬ ಮಣಿಗನ್ನಡಿಯಲ್ಲಿ ಕಂಡ ತನ್ನ ಸ್ವರೂಪಾತಿಶಯವುಳ್ಳವನಾದರೂ "ಎಲ್ಲಿ ನೋಡಿದಲ್ಲಿ ಮನವೆಳಸಿದಡೆ....ಪರವಧುವನು ಮಹಾದೇವಿ ಎಂಬೆ" ಎಂಬಂತೆ ಭಾವವಿಲಾಸ ಮತ್ತು ಆಸೆಗಳಿಂದ ಕೂಡಿದ ಸ್ತ್ರೀಯರ ಮಿಂಚಿನಂತೆ ಚಂಚಲವಾದ ಸುಂದರ ನೇತ್ರಗಳ ನೋಟಕ್ಕೆ ಸಿಕ್ಕದಿರುವವನೂ ಆದ, ಬಸವೇಶನಿಗಿಂತ ಪರದೇವತೆ ಇಲ್ಲ ವೆಂದು ಅಭಿಪ್ರಾಯ.

ಉತ್ಕಳಿಕ

ಆಶಾಜಲ ಸುತಶಿಖರಿ ಸಮೂಹ ಕ್ಲೇಶತಿಮಿಂಗಿಲಮಿತ್ರಗ್ರಾಹ
ಸ್ನಕಳತ್ರ ಸಮುತ್ಕರ ನವಫೇನ ಪ್ರಕಟಿತ ಬಾಂಧವಮಂಡಲಮೀನ

ವ್ಯಾಧಿಪರಿಷದುತ್ತುಂಗತರಂಗ ಕ್ರೋಧವಿಜೃಂಭಣ ಘೋರಭುಜಂಗ
ಸ್ಫುರದುರುತರಭವಜಲಧಿವಹಿತ್ರಾತ್ ದುರಿತಲತಾಚಯಲವನಲವಿ
ತ್ರಾತ್ ||೧೯|| ನೈವಾ- ಪರಂದೈವತಮ್

ಟೀಕಾ–ಆಶಾಜಲ–ಆಶೆಯೆಂಬ ಜಲವುಳ್ಳ, ಸುತ–ಮಕ್ಕಳೆಂಬ, ಶಿಖರಿ-ಪರ್ವತಗಳ,ಸಮೂಹ-ಸಮೂಹವುಳ್ಳ, ಕ್ಲೇಶ-ಪಂಚಕ್ಲೇಶಗಳೆಂಬ, ತಿಮಿಂಗಲ-ತಿಮಿಂಗಿಲವೆಂಬ ಪ್ರಾಣಿವಿಶೇಷಗಳಿಂದಕೂಡಿದ, ಮಿತ್ರಗ್ರಾಹ-ಮಿತ್ರರೂಪ ಮೊಸಳೆಗಳುಳ್ಳ, ಸ್ವಕಳತ್ರ-ತನ್ನಹೆಂಡತಿ ಮೊದಲಾದವರ, ಸಮುತ್ಕರ–ನಿಕರ ವೆಂಬ, ನವಫೇನ–ಹೊಸ ಹೊಸನೊರೆಯಿಂದ ಸಹಿತವಾದ, ಪ್ರಕಟಿತ–ಲೋಕ ದಲ್ಲಿ ಕಂಡುಬರುವ, ಬಾಂಧವ-ಬಂಧುಗಳ, ಮಂಡಲ-ಗುಂಪುಗಳೆಂಬ, ಮೀನ-ಮೀನುಗಳಿಂದ ಸಹಿತವಾದ, ವ್ಯಾಧಿ-ಉದರಾದಿ ರೋಗಗಳ,ಪರಿಷತ್-ಸಮೂಹ ವೆಂಬ, ಉತ್ತುಂಗ–ದೊಡ್ಡದಾದ, ತರಂಗ-ಅಲೆಗಳಿಂದ ಕೂಡಿರುವ, ಕ್ರೋಧ ವಿಜೃಂಭಣ-ಕೋಪ ಪ್ರಕಟಣೆಯೆಂಬ, ಘೋರ-ಭಯಂಕರವಾದ, ಭುಜಂಗ -ಹಾವುಗಳುಳ್ಳ, ಸ್ಫುರತ್-ವ್ಯಕ್ತವಾಗಿರುವ, ಉರುತರ-ಅಗಾಧವಾದ, ಭವಜಲಧಿ-ಜನನ ಜರಾಮರಣರೂಪ ಸಂಸಾರಸಾಗರದಿಂದ ದಾಟಿಸಲು, ವಹಿತ್ರಾತ್-ನೌಕೆ ಯಂತಿರುವವನೂ, ಮತ್ತು ದುರಿತಲತಾಚಯ-ಪಾಪಗಳೆಂಬ ಲತೆಗಳಗುಂಪನ್ನು, ಲವನ-ಕತ್ತರಿಸವಿಕೆಯಲ್ಲಿ, ಲವಿತ್ರಾತ್-ಕುಡುಗೋಲಿನಂತೆ ಸಮರ್ಥನಾದವನೂ ಆದ, ಬಸವಾಖ್ಯಾತ್ ಪರಂ ದೈವತಂ ನೈವ ಎಂದು ಹಿಂದಿನಂತೆಯೇ ಅರ್ಥ.

ಭಾವಾರ್ಥ:—ಆಶಾರೂಪವಾದ ಜಲ, ಪುತ್ರರೆಂಬ ಪರ್ವತ ಸಮೂಹ, ಪಂಚಕ್ಲೇಶಗಳೆಂಬ ತಿಮಿಂಗಿಲಗಳು, ಸ್ನೇಹಿತರೆಂಬ ಮೊಸಳೆ, ಪತ್ನೀ, ಅಣ್ಣ ತಮ್ಮಂದಿರೆಂಬ ನೂತನವಾದ ನೊರೆಗಳು, ಇವರಿಗೆಲ್ಲಾ ಸಂಬಂಧಿಸಿದ ಬಂಧು ಸಮುದಾಯವೆಂಬ ಮೀನುಗಳು ಉದರಪೀಡಾದಿರೋಗಗಳೇ ದೊಡ್ಡ ಅಲೆ ಗಳು, ಕೋಪತಾಪಗಳೆಂಬ ಭಯಂಕರ ಸರ್ಪಗಳು ಎಂಬಂತಿರುವ ಅಗಾಧವಾದ ಜನನ ಜರಾಮರಣರೂಪ ಸಂಸಾರಸಾಗರದಿಂದ ಭಕ್ತರನ್ನು ದಾಟಿಸಲು ಸಮು ದ್ರ ದಡಕ್ಕೆ ಜನರನ್ನು ಬಿಡುವ ಹರಿಗೋಲಿನೋಪಾದಿಯಾಗಿಯೂ, ಸಂಚಿತಾದಿ

ತಾಪತ್ರಯಗಳನ್ನು ನೀಗಿಸಲು ಲತೆಗಳನ್ನು ಕೊಯ್ಯುವ ಕುಡುಗೋಲಿನಂತೆಯೂ, ಇರುವ ಬಸವೇಶನಂಥ ಶ್ರೇಷ್ಠದೈವವಿರಲಾರದೆಂದು ಪಂಚಮೀ ವಿಭಕ್ತಿಯಲ್ಲಿ ಸಹೃದಯರ ಚಿತ್ತರಂಜನೆಯಾಗುವಂತೆ ಬಣ್ಣಿಸಿರುತ್ತಾನೆ.

ಇಷ್ಟಕ್ಕೆ ಕವಿಯು ತೃಪ್ತನಾಗದೆ ಇನ್ನೂ ಸ್ತೋತ್ರಾಸಕ್ತನಾಗಿ ಶ್ರದ್ಧಾಭಕ್ತಿಯಿಂದ ವಿದ್ವಾಂಸರ ಮನಸೆಳೆಯುವಂತೆ ಷ. ವಿ. ಯಲ್ಲಿ ಸ್ತುತಿಯನ್ನು ರಚನೆ ಮಾಡಿದ್ದಾನೆ.

## ಷಷ್ಠೀ ವಿಭಕ್ತಿಃ

ಚಿದ್ವ್ಯೋಮ ಸ್ಮಯಮಾನ ಶೀತಕಿರಣೋದ್ಯೋತತ್ಸುಧಾ ಮಾಧುರೀ
ನಿರ್ವೃತ್ತಸ್ನಪನ ಪ್ರಮೋದ ಭರಿತ ಶ್ರೀನೀಲಕಂಠಾತ್ಮನಃ
ಉನ್ಮೀಲದ್ಗುಣರತ್ನ ರೋಹಣ ಮಹಾಶೈಲಸ್ಯ ತಸ್ಯ ಪ್ರಭೋಃ
ಭಾಂಡಾಗಾರ ಧುರಂಧರಸ್ಯ ಬಸವಾಮಾತ್ಯಸ್ಯ ದಾಸ್ಯಂ ಭಜೇ॥೨೦॥

ಟೀಕಾ-ಚಿದ್ವ್ಯೋಮ-ಸಂವಿತ್, ಚಿತ್ ಎಂಬ ಆಕಾಶದಲ್ಲಿ, ಸ್ಮಯಮಾನ-ಸ್ವಲ್ಪಪ್ರಕಾಶಮಾನವಾದ, ಶೀತಕಿರಣ-ಚಂದ್ರನಿಂದ, ಉದ್ಯೋತತ್-ಮೇಲಕ್ಕೆ ಬರುತ್ತಿರುವ, ಸುಧಾ-ಅಮೃತದ, ಮಾಧುರೀ-ಮಾಧುರ್ಯದಿಂದ, ನಿರ್ವೃತ್ತ-ಉಂಟಾದ, ಸ್ನಪನ-ಸ್ನಾನದಿಂದ ಕೂಡಿದ, ಆತಏವ ಆದಕಾರಣವಾಗಿಯೇ, ಪ್ರಮೋದ-ಅತ್ಯಂತಾನಂದದಿಂದ, ಭರಿತ-ತುಂಬಿದ, ಪೂರ್ಣನಾದ, ಶ್ರೀನೀಲಕಂಠಾತ್ಮನಃ-ಸಾಕ್ಷಾತ್ ಶಿವಸ್ವರೂಪಿಯಾದಂಥವನೂ, ಉನ್ಮೀಲತ್-ಹೆಚ್ಚಾಗುತ್ತಿರುವ, ಗುಣ-ಶಾಂತ್ಯಾದಿ ಆತ್ಮಗುಣಗಳೆಂಬ, ರತ್ನ-ರತ್ನಗಳಿಗೆ, ಶ್ರೇಷ್ಠವಸ್ತುಗಳಿಗೆ, ರೋಹಣ ಮಹಾಶೈಲಸ್ಯ-ರತ್ನಗಳಿಗೆ ಆಶ್ರಯವಾದ ಮೇರುಪರ್ವತದಂತಿರುವ, ತಸ್ಯ-ಅಂಥ, ಪ್ರಭೋಃ-ಪ್ರಭುವಾದ, ಭಾಂಡಾಗಾರ ಧುರಂಧರಸ್ಯ-ಭಂಡಾರದ ಕಾರ್ಯದಲ್ಲಿ ದಕ್ಷನಾದಂಥ, ಬಸವಾಮಾತ್ಯಸ್ಯ-ಅರ್ಥ ಮತ್ತು ರಾಜನೀತಿಶಾಸ್ತ್ರಜ್ಞನಾದ ಸಚಿವಬಸವೇಶನ, ದಾಸ್ಯಂ-ಸೇವಕತನವನ್ನು, ಭಜೇ-ಹೊಂದುತ್ತೇನೆ ಎಂದರ್ಥ, ಇಲ್ಲಿ 'ಭಜ' ಎನ್ನುವುದು 'ಭಜಸೇವಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

ಭಾವಾರ್ಥ—ಚಿದಾಕಾಶದಲ್ಲಿ ಪ್ರಕಾಶಮಾನ ಚಂದ್ರನಿಂದ ಹೊರಡುತ್ತಿರುವ ಅಮೃತದ ಧಾರೆಯಿಂದ ಉಂಟಾದ ಸ್ನಾನದಿಂದ ಶ್ರೀಕಂಠನನ್ನು ತೃಪ್ತಿಪಡಿಸಿದವನೂ, ಎಂದರೆ ಶಿವಯೋಗಾನುಷ್ಠಾನದಿಂದ ಕುಂಡಲಿನೀ ಎಂಬ ನಾಗವನ್ನು ಎಬ್ಬಿಸಿದ್ದರಿಂದ ಹೃತ್ಪುಂಡರೀಕದಲ್ಲಿರುವ ಶಿವನನ್ನು ಸಹಸ್ರಾರದ ಅಮೃತಧಾರೆಯಿಂದ ತೃಪ್ತಿಪಡಿಸಿದವನೂ, ಮೇರುಪರ್ವತವು ರತ್ನಗಳಿಗೆ ಆಶ್ರಯವಾಗಿರುವಂತೆ ಶಾಂತ್ಯಾದಿ ಆತ್ಮಗುಣಮಣಿಗಳಿಂದ ಭೂಷಿತನಾದವನೂ, ಭಂಡಾರ ಕಾರ್ಯದಲ್ಲಿ ಸಮರ್ಥನೂ ಪ್ರಭುವೂ ಮತ್ತು ಅರ್ಥ ಶಾಸ್ತ್ರ ನೀತಿಶಾಸ್ತ್ರಜ್ಞನೂ ಆದ ಬಸವೇಶನಿಗೆ ದಾಸನಾಗಿರುವೆನೆಂದು ತಾತ್ಪರ್ಯ.

### ಕಳಿಕ–ಹರಿಗತಿ ರಘಟ

ಅಪಿಚ ಶರನೀಹಾರ ಹಾರಮಲಯಜಭಸಿತ ಸಿತದಿವ್ಯದೇಹಸ್ಯ
ಕುಪಥಚರದುರ್ಭಾವ ಭಾವ ಭವಮುದ ವಿಹೃತಿಹೃದಿಸುಸನ್ನಾಹಸ್ಯ
ಸಂಗಮೇಶ್ವರ ನಿಹಿತ ಹಿತಮಧುರ ಸಂಗೀತ ಗೀತಾನುಭಾವಸ್ಯ
ಜಂಗಮ ಮನಸ್ಸಂಗ ಸಂಗತೇಹಾದಾನ ದಾವ ಪ್ರಭಾವಸ್ಯ ||೨೧||

'ಬಸವಾಮಾತ್ಯಸ್ಯ ದಾಸ್ಯಂಭಜೆ'

ಟೀಕಾ:- ಅಪಿಚ-ಇಷ್ಟಲ್ಲದೆ, ಶರ-ಶರ (ಕಾಚಿ)ವೆಂಬ ಹುಲ್ಲು, ನೀಹಾರ-ಹಿಮ ಮಂಜು,ಹಾರ-ಮುತ್ತಿನ ಅಥವಾ ಹೂವಿನ ಸರ, ಮಲಯಜ–ಮಲಯ ಪರ್ವತದಲ್ಲಿ ಬೆಳೆದ ಶ್ರೀಗಂಧ, ಭಸಿತ-ಭಸ್ಮ ಇವುಗಳಂತೆ, ಸಿತ–ಶುಭ್ರವೂ, ದಿವ್ಯ-ಶ್ರೇಷ್ಠವೂ ಚೆನ್ನಾಗಿ ಪ್ರಕಾಶಮಾನವೂ ಆದ, ದೇಹಸ್ಯ-ಶರೀರಸಹಿತನೂ ಆಗಿ, ಕುಪಥ-ಕೆಟ್ಟಮಾರ್ಗವಲ್ಲಿ, ಚರ–ನಡೆಯುವುದರಲ್ಲಿ ಆಸಕ್ತರ, ದುರ್ಭಾವ-ಮನೋವಿಕಾರದಿಂದ, ಭಾವ-ಉಂಟಾದ,ಭವಮುದ-ಸಂಸಾರದ ಸೊಕ್ಕನ್ನು, ವಿಹೃತಿ-ನಾಶಪಡಿಸುವ ಕಾರ್ಯದಲ್ಲಿ, ಹೃದಿ-ತನ್ನ ಹೃದಯದಲ್ಲಿ,ಸುಸನ್ನಾಹಸ್ಯ-ಅತ್ಯಂತ ಉತ್ಸಾಹಶಾಲಿಯಾದ, ಸಂಗಮೇಶ್ವರ-ಸಂಗಮೇಶ್ವರನೆಂಬ ಇಷ್ಟದೇವರಲ್ಲಿ, ನಿಹಿತ–ಇಡೋಣದರಿಂದ,ಹಿತ-ಹಿತಕರವೂ, ಮಧುರ-ಇಂಪಾಗಿಯೂ ಇರುವ, ಸಂಗೀತ-ಸುಮಧುರ ಗಾನದ, ಗೀತಾನುಭಾವಸ್ಯ-

ಗಾಯನದ ಅನುಭವವಿರುವ, ಜಂಗಮ-ಜಂಗಮರೆಂದು ಪ್ರಸಿದ್ಧರಾದ ಮಾಹೇಶ್ವರರ ಅರ್ಥಾತ್ ಶಿವಜ್ಞಾನಿಗಳ, ಮನಃಸಂಗ-ಮನಸ್ಸಿನ ಬಯಕೆಗೆ, ಸಂಗತ-ಯುಕ್ತವಾದ, ಈಹಾದಾವ-ಅಪೇಕ್ಷೆ ಅಥವಾ ಬಯಕೆಯೆಂಬ ಅಗ್ನಿಗೆ ದಾವಪ್ರಭಾವಸ್ಯ-ಕಾಳ್ಗಿಚ್ಚಿನಂತಿರುವನೂ ಎಂದರೆ ಅದರ ನಿವಾರಣೆಗೆ ಶಕ್ತನೂ ಆದ, ಬಸವಾಮಾತ್ಯಸ್ಯ ದಾಸ್ಯಂ ಭಜೇ ಎಂದು ಅರ್ಥ.

ಭಾವಾರ್ಥ:— ಶುದ್ಧವೂ ಧವಳವೂ ಆಗಿರುವ ಮುತ್ತಿನ ಹಾರ, ಮಂಜು ಮುಂತಾದ ವಸ್ತುಗಳಂತೆ ಶುಭ್ರ ಮತ್ತು ಪ್ರಕಾಶಮಾನವಾದ ದೇಹವನ್ನು ತಾಳಿ ದುರಾಚಾರ-ದುರ್ಮಾರ್ಗದಲ್ಲಿ ಆಸಕ್ತರಾದ ಕಾರಣ ಮನೋವಿಕಾರ ವಶದಿಂದ ಪ್ರಾಪ್ತವಾದ ಸಂಸಾರ ಮದವನ್ನು ತೊಲಗಿಸುವುದರಲ್ಲಿ ಬಹುಕುತೂಹಲವಾಗಿ, ತನ್ನ ಇಷ್ಟದೈವವಾದ ಸಂಗಮೇಶ್ವರನಲ್ಲಿ ಆಸಕ್ತನಾಗಿ, ಹಿತವೂ ಇಂಪೂ ಆದ ಸಂಗೀತವನ್ನು ಆ ದೈವದ ಒಲುಮೆಗೋಸ್ಕರ ಗಾನ ಮಾಡುತ್ತಲೂ ಜಂಗಮರೆಂದು ಹೆಸರಾಂತ ಮಾಹೇಶ್ವರರ ಬೇಡಿಕೆಗಳನ್ನೀಡೇರಿಸಿ ಅವರ ಅನುಗ್ರಹಕ್ಕೆ ಪಾತ್ರನಾಗುತ್ತಲೂ ಇರುವ ಬಸವೇಶನಿಗೆ ಸೇವಕನಾಗುತ್ತೇನೆ.

### ಕಳಿಕ-ಹರಿಗತಿ ರಘಟ

ಭಕ್ತಿಮಹಿಳಾ ಶ್ಲೇಷಜನಿತಮೇದುರ ವಿಪುಲಪುಲಕಸಂಯೋಗಸ್ಯ
ಮುಕ್ತಿಸೌಖ್ಯಾಧಾನದಾನವಿದ್ಯಾನಿರತ ರತಮುಹೋದ್ಯೋಗಸ್ಯ
ಪರಿಚಿತಸುಧಾಸಾರಸಾರ ಮಧುರಿಮನಿಕೃತಿಕೃತಿಚಣವಚಸ್ಕಸ್ಯ
ಧರಣಿದಿಗ್ವಿಯ ೭ ತಲ ತಲ ನಿಬಿಡ ಶಶಿಕರನಿಕರ ನಿಭಯಶಸ್ಕಸ್ಯ ||೨೨||

ಟೀಕಾ:-ಭಕ್ತಿ-ನಿಷ್ಠಾ ಮೊದಲಾದ ಭಕ್ತಿಯೆಂಬ,ಮಹಿಳಾ ಸ್ತ್ರೀಯ ಶಕ್ತಿಯ ಭಕ್ತಿಶಬ್ದ ಸ್ವರೂಪವು ಸ್ತ್ರೀಲಿಂಗವಾಗಿರುವುದರಿಂದಲೂ, ಭಕ್ತಿಯು ಶಿವಾದ್ವೈತದಲ್ಲಿ ಶಕ್ತಿ ರೂಪವಾಗಿ ಪರಿಗಣಿತವಾಗಿರುವುದರಿಂದಲೂ,ಅದು ಎಲ್ಲರಿಗೂ ಲಲಿತವಾಗಿರುವುದರಿಂದಲೂ,ಮಹಿಳೆಯೆಂದು ಕವಿ ಹೇಳಿದ್ದಾನೆ. ಆಶ್ಲೇಷ-ಆಲಿಂಗನದಿಂದ ಅರ್ಥಾತ್ ನಿರಂತರವಾಗಿ ಭಕ್ತಿಮಾರ್ಗ ಸಂಪರ್ಕದಿಂದ, ಜನಿತ-ಉಂಟಾದ, ಮೇದುರ-ನಿಬಿಡವೂ, ವಿಪುಲ-ಅತಿಶಯವೂ, ಆದ ಪುಲಕ

ರೋಮಾಂಚಗಳ, ಸಂಯೋಗಸ್ಯ-ಸಂಬಂಧ ಸಹಿತನಾದ, ಮುಕ್ತಿ-ಸ್ವತಂತ್ರಸ್ವಪ್ರಕಾಶಪರಶಿವಾನಂದಾಭಿವ್ಯಕ್ತಿಯೆಂಬ ಮೋಕ್ಷದ,ಸೌಖ್ಯ-ಸುಖವನ್ನು, ಆಧಾನ-ಕೊಡತಕ್ಕ, ದಾನ ವಿದ್ಯಾನಿರತ-ದಾನದಲ್ಲಿಯೂ ವಿದ್ಯೆಯಲ್ಲಿಯೂ ಆಸಕ್ತನೂ, ಮತ್ತು ರತ-ಇಷ್ಟವೂ, ಉತ್ತಮವೂ ಆದ, ಮಹೋದ್ಯೋಗಸ್ಯ-ಉತ್ತಮ ವ್ಯಾಪಾರನಿರತನೂ,ಪರಿಚಿತ-ಪರಿಚಯವಾದ, ಸುಧಾಸಾರ-ಅಮೃತದ ಧಾರಾಪ್ರವಾಹದ, ಸಾರ-ಶ್ರೇಷ್ಠವಾದ, ಮಧುರಿಮ-ಮಾಧುರ್ಯವನ್ನು, ನಿಕೃತಿ-ತಿರಸ್ಕರಿಸತಕ್ಕ, ಕೃತಿಚಣ–ಗ್ರಂಥರಚನೆಯಲ್ಲಿ ಚತುರವಾದ, ವಚಸ್ಕಸ್ಯ–ವಚನದಿಂದ ಕೂಡಿದವನೂ, ಧರಣಿ-ಭೂಮಂಡಲ, ದಿಕ್-ದಿಕ್ಕುಗಳು, ವಿಯತ್-ಆಕಾಶ-ಅತಲ-ಪಾತಾಳ ಇವುಗಳ, ತಲ-ಪ್ರದೇಶದಲ್ಲಿ, ನಿಬಿಡ-ದಟ್ಟವಾಗಿಹರಡಿದ, ಶಶಿ-ಚಂದ್ರನ,ಕರ–ಕಿರಣಗಳ, ನಿಕರ–ಗುಂಪಿಗೆ, ನಿಭ-ಸರಿಸಮಾನವಾದ,ಯಶಸ್ಕಸ್ಯ ತನ್ನಕೀರ್ತಿಯಿಂದ ಕೂಡಿದ, 'ಬಸವಾಮಾತ್ಯಸ್ಯ ದಾಸ್ಯಂ ಭಜೇ' ಎಂದು ಮೊದಲಿನಂತೆಯೇ ಅರ್ಥ.

ಭಾವಾರ್ಥ—ಶಿವಾದ್ವೈತ ವೇದಾಂತದಲ್ಲಿ ಪ್ರಧಾನವಾಗಿ ಜ್ಞಾನಕ್ರಿಯಾ ಶಕ್ತ್ಯಾತ್ಮಕಸ್ವತಂತ್ರತಾಶಕ್ತಿ ಸಹಿತನಾದ ಪರಶಿವ ಬ್ರಹ್ಮನು ಪಂಚಕೃತ್ಯ ನಾಟ್ಯ ರಸಿಕನಾದ್ದರಿಂದ ಪ್ರಪಂಚಾಕಾರವಾಗಿ ಪರಿಣಾಮವಾಗುವನು. ಅದರಂತೆಯೇ ಭಕ್ತಿಜ್ಞಾನ ವೈರಾಗ್ಯಗಳು ಮೋಕ್ಷಕ್ಕೆ ಪ್ರಧಾನಸಾಧನಗಳಾಗಿದ್ದರೂ ಶಿವಪಾರಮ್ಯದಲ್ಲಿ ಭಕ್ತಿಗೇ ಪ್ರಾಧಾನ್ಯವನ್ನು ಕೊಡುತ್ತಾರೆ. ಶಕ್ತಿಯೇ ಭಕ್ತಿರೂಪವಾಗಿದೆ ಎಂದು ಇವರ ಭಾವನೆ."ಭಕ್ತಿಲಕ್ಷ್ಮೀ ಸಮುತ್ಪನ್ನೇಕಿಮನ್ಯದುಪಯಾಚಿತಂ" ಎಂಬಂತೆ ಭಕ್ತಿಯನ್ನು ತಿಳಿದು ಭಕ್ತಿಮಾರ್ಗದಲ್ಲಿ ನಡೆದು, 'ಭಕ್ತಿಭಂಡಾರಿ' ಎಂಬ ಹೆಸರು ಪಡೆದವನೂ, ಮುಕ್ತಿ ಸುಖವನ್ನು ಕೊಡುವ ದಾನ ಮತ್ತು ವಿದ್ಯೆಗಳಲ್ಲಿ ನಿರತನಾಗಿ ಉತ್ತಮ ವ್ಯಾಪಾರಾಸಕ್ತನೂ, ಅಮೃತದ ಮಾಧುರ್ಯವನ್ನು ಮೀರಿ ಮಾತನಾಡುವುದರಲ್ಲಿಯೂ, ಗ್ರಂಥರಚನೆಯಲ್ಲಿಯೂ ನೈಪುಣ್ಯವುಳ್ಳವನೂ, ಭೂಮಂಡಲದಲ್ಲಿ ತುಂಬಿ ದಿಗಂತರಗಳವರೆಗೂ ವ್ಯಾಪಿಸಿದ ಚಂದ್ರಕಿರಣಗಳಂತಿರುವ ಕೀರ್ತಿಗೆ ಪಾತ್ರನೂ ಆದ ಶ್ರೀ ಬಸವೇಶನನ್ನು ಭಜಿಸುತ್ತೇನೆಂದು ಭಾವ.

ನಿಟಿಲಲೋಚನ ಭಕ್ತವಾತ್ಸಲ್ಯ ಕಲ್ಯಾಣ
ಕಟಕ ನೀತಾವಾಸ ನಿಸ್ಸೀಮ ಕಲ್ಯಾಣ
ಗೋಚರಾಂಚಿತ ವಪುರ್ವಿಸ್ಫೂರ್ತಿ ಮಡಿವಾಳ
ಮಾಚಯ ಪ್ರಭು ದೀರ್ಘನಯನಾಂಚಿತೋತ್ತಾಳ
ಕೋಪಪ್ರಸಾದ ಭಾಜನತಾವಿಧಾಕ್ರಾಂತ
ದೀಪಿತಪ್ರಥಮಾನಭಕ್ತಿ ವಿನಯಾತ್ಯಂತ
ಭಾರವೈದಿಕ ಸುವಿಶ್ರುತ ಶಿವಾಚಾರಸ್ಯ
ಸಾರಜಂಗಮಸೂಕ್ತಿ ಮಣಿಕರ್ಣಪೂರಸ್ಯ ॥ ೨೩॥

ಟೀಕಾ—ನಿಟಿಲ-ಹಣೆಯಲ್ಲಿರುವ, ಲೋಚನ-ಅಗ್ನಿರೂಪವಾದ ಕಣ್ಣುಳ್ಳಂಥ ಈಶ್ವರನಿಂದ, ಭಕ್ತ-ತನ್ನ ಭಕ್ತರ ವಿಷಯದಲ್ಲಿ ಉಂಟಾದ, ವಾತ್ಸಲ್ಯ-ಕರುಣೆಯಿಂದ, ಕಲ್ಯಾಣಕಟಕ-ಕಲ್ಯಾಣನಗರದಲ್ಲಿ, ನೀತ-ಹೊಂದಿಸಲ್ಪಟ್ಟ, ಆವಾಸ-ನಿವಾಸಸ್ಥಾನವಾಗಿರುವಂಥವನೂ, ನಿಸ್ಸೀಮ-ಸೀಮಾತೀತವಾದ, ಕಲ್ಯಾಣ-ಮಂಗಲಕ್ಕೆ ಗೋಚರ-ವಿಷಯವೂ, ಅಂಚಿತ-ಪ್ರಶಂಸನೀಯವೂ ಆದ, ವಪುಃ-ದೇಹದಲ್ಲಿ, ವಿಸ್ಫೂರ್ತಿ-ಸ್ಫುರಿಸತಕ್ಕ, ಮಡಿವಾಳಮಾಚಯ-ಮಡಿವಾಳವೃತ್ತಿ ನಿರತನಾದ ಮಾಚಯ್ಯನ, ಪ್ರಭು-ಅಲ್ಲಮಪ್ರಭುದೇವ ಇವರ, ದೀರ್ಘನಯನ-ವಿಶಾಲವಾದ ನೇತ್ರಗಳಿಂದ, ಅಂಚಿತ-ಶೋಭಿಸುವ, ಉತ್ತಾಳ-ಹೆಚ್ಚಾದ, ಕೋಪ-ಕ್ರೋಧವೇನು, ಪ್ರಸಾದ-ಅನುಗ್ರಹವೇನು ಇವುಗಳಿಗೆ ಭಾಜನತಾ-ಪಾತ್ರನಾಗುವಿಕೆಯ, ವಿಧ-ರೀತಿಯನ್ನು,ಆಕ್ರಾಂತ-ಹೊಂದಿದಂಥ, ದೀಪಿತ—ಪ್ರಕಾಶಸಹಿತವೂ,ಪ್ರಥಮಾನ-ವಿಸ್ತಾರವೂ ಆದ, ಭಕ್ತಿ-ಶ್ರದ್ಧೆ ಮತ್ತು ವಿನಯ-ನಮ್ರತೆ ಇವುಗಳಿಂದ, ಅತ್ಯಂತಭಾರ-ಅಧಿಕನಾಗಿ ಪರಿಪೂರ್ಣನಾದಂಥ ಅಲ್ಲದೆ ವೈದಿಕ-ವೇದೋಪನಿಷದಾಗಮಗಳಲ್ಲಿ, ಸುವಿಶ್ರುತ-ಅತ್ಯಂತ ಪ್ರಸಿದ್ಧವಾದ, ಶಿವಾಚಾರಸ್ಯ-ಶಿವಜ್ಞಾನಾದಿ ಪರಮ ಶಿವಧರ್ಮಗಳ ಆಚರಣೆಯುಳ್ಳಂಥವನೂ ಅಲ್ಲದೆ, ಸಾರ-ಶಿವತತ್ತ್ವಜ್ಞಾನ ತದಾಚರಣೆಯಲ್ಲಿ ಶ್ರೇಷ್ಠರಾದ, ಜಂಗಮ-ಮಾಹೇಶ್ವರರ, ಸೂಕ್ತಿ-ಶ್ರವಣಮನಗಳಿಗೆ ಮಧುರವೂ ಹಿತವೂ ಆದ

ಸತ್ಯವಚನಗಳೆಂಬ, ಮಣಿ-ರತ್ನಗಳಿಂದ ರಚಿತವಾದ, ಕರ್ಣಪೂರಸ್ಯ–ಕರ್ಣ ಕುಂಡಲಗಳುಳ್ಳಂಥ 'ಬಸವಾಮಾತ್ಯಸ್ಯ ದಾಸ್ಯಂ ಭಜೇ ಎಂದು' ಮೊದಲಿನಂ ತೆಯೇ ಅರ್ಥ.

ಭಾವಾರ್ಥ–ಪರಮೇಶ್ವರನು ತನ್ನ ಭಕ್ತರಮೇಲಿನ ಅತಿಶಯವಾದ ಕರುಣೆಯಿಂದ ಕಲ್ಯಾಣ ಪಟ್ಟಣದಲ್ಲಿ ನಂದೀಶ್ವರ ರೂಪಿಯಾದ ಬಸವೇಶನನ್ನು ಸೃಜಿಸಿದನು. ಆತನು ಅದರಂತೆ ಸ್ವಧರ್ಮಾನುಸಾರವಾಗಿ ಶಿವ ರಾಜ್ಯಭಾರ ವನ್ನುವಹಿಸಿ ನಡೆಯಿಸುತ್ತಿದ್ದನು. ಹೀಗಿರುವಾಗ ಶಿವಭಕ್ತ ಮಡಿವಾಳ ಮಾಚಿ ದೇವರ ಕೋಪಕ್ಕೆ ಪಾತ್ರನಾಗಬೇಕಾಯಿತು. ಅದನ್ನು ತನ್ನ ವಿನಯಾದಿಗ ಳಿಂದ ಪರಿಹರಿಸಿಕೊಂಡು ಭಕ್ತಿ ವಿನಯಾದಿಗಳಿಗೆ ಪಾತ್ರನಾದ್ದರಿಂದ ಶ್ರೀ ಪ್ರಭುದೇವಾದಿಗಳ ಅನುಗ್ರಹಕ್ಕೆ ಯೋಗ್ಯನಾಗಿಯೂ, ಅಧಿಕ ಭಕ್ತಿವಿನಯಗ ಳಿಂದ ತುಂಬಿದವನಾಗಿಯೂ, ಹಾಗೆಯೇ ವೇದಾಗಮೋಪನಿಷತ್ತುಗಳಲ್ಲಿ ಹೇಳಿ ರುವ ಶಿವಜ್ಞಾನಾದಿ ಶಿವಧರ್ಮಗಳ ಆಚರಣೆಗಳಲ್ಲಿ ನಿರತನಾಗಿ, ಅವುಗಳನ್ನು ಬೋಧಿಸುವ ಜಂಗಮರೆಂಬ ಮಾಹೇಶ್ವರರ ಹಿತವೂ ಮಿತವೂ ಮಧುರವೂ ಆದ ವಚನಗಳನ್ನು ಶ್ರವಣಮಾಡಿ ಜೀವನ್ಮುಕ್ತದಶೆಯನ್ನು ಹೊಂದಿದ ಬಸವೇಶ ನೆಂಬ ಮಹಾತ್ಮನ ದಾಸ್ಯವನ್ನು ಹೊಂದುತ್ತೇನೆ ಎಂದು ತಾತ್ಪರ್ಯ.

ಕವಿಯು ಬಸವೇಶನ ವಿಷಯವಾಗಿ ಷಷ್ಠೀ ವಿಭಕ್ತಿಯಲ್ಲಿ ನುತಿಸಿ ಪುನಃ ತನ್ನಮನವು ಇನ್ನೂ ತಣಿಯದೆ ಇರುವುದರಿಂದ ಸಪ್ತಮೀ ವಿಭಕ್ತಿಯಲ್ಲಿ ಸ್ತೋತ್ರವನ್ನು ರಚಿಸಿರುತ್ತಾನೆ.

**ಸಪ್ತಮೀ ವಿಭಕ್ತಿಃ**

ಶಾ॥ ಓಂಕಾರಾಂಕುರ ವೇದಪಲ್ಲವಲಸತ್ಪಂಚಾಕ್ಷರೀ ಮಂಜರೀ
ತತ್ತ್ವಾಮೋದ ನಿತಾಂತಲುಬ್ಧ ಶರಣಾನೀಕೇದ್ಧ ಪುಷ್ಪಂಧಯಾ
ಯಾಽಸೌನಾದಲತಾ ತದೀಯ ಸುಷುಮಾರಾಮಾಭಿರಾಮಸ್ಥಲೇ
ತಸ್ಮಿನ್ ಶ್ರೀಬಸವಾಹ್ವಯೇ ಗುಣನಿಧೌ ಕಿಂವಾನ ಲೋಕೋತ್ತರಂ? ॥

ಟೀಕಾ–ಓಂಕಾರಾಂಕುರ-ಓಂಕಾರ ಅಥವಾ ಪ್ರಣವವೆಂಬ ಅಂಕುರ ದಿಂದ ಹೊರಟ,ವೇದ-ಋಗಾದಿ ಚತುರ್ವೇದಗಳೆಂಬ, ಪಲ್ಲವ–ಚಿಗುರುಗಳಲ್ಲಿ,

ಲಸತ್-ಶೋಭಿಸುವ, ಪಂಚಾಕ್ಷರೀ- ಪಂಚಾಕ್ಷರಿಯೇ ಆದಿಯಾದ ಮಂತ್ರಗಳ, ಮಂಜರೀ-ಪುಷ್ಪಗಳಗೊಂಚಲಿನ, ತತ್ತ್ವಮೋದ–ಷಟ್ತ್ರಿಂಶತ್-ತತ್ತ್ವಗಳೆಂಬ ಸುಗಂಧಕ್ಕೋಸುಗವಾಗಿ, ನಿತಾಂತ-ಹೆಚ್ಚಾಗಿ, ಲುಬ್ಧ-ಆಸಕ್ತರಾದ,ಶರಣ-ಶಿವ ಶರಣರಾದ ಜಂಗಮರ,ಅನೀಕ–ಸಮೂಹದಿಂದ, ಇದ್ಧ–ಪ್ರಚುರವಾದ,ಪುಷ್ಪಂಧಯಾ-ದುಂಬಿಗಳುಳ್ಳಂಥ, ಯಾ-ಯಾವ,ಅಸೌ-ಈ,ನಾದಲತಾ-ಅನಾಹತಾದಿ ನಾದವೆಂಬ ಲತೆಯುಂಟೋ, ತದೀಯ-ಆ ಲತೆಯ, ಸುಷುಮಾ–ಪರಮಕಾಂತಿ ಎಂಬ ಪರಪ್ರಕಾಶರೂಪವಾದ, ಆರಾಮ-ಪುಷ್ಪೋದ್ಯಾನದಿಂದ ಉಪವನದಿಂದ, ಅಭಿರಾಮ-ಸುಂದರವಾದ, ಸ್ಥಲೀ-ಸ್ಥಾನವಾಗಿಯುಳ್ಳ ಸ್ಥಾನಸದೃಶನಾದಂಥ, ಗುಣನಿಧೌ-ಶಾಂತ್ಯಾದಿ ಆತ್ಮಗುಣಗಳಿಗೆ ಸಾಗರದಂತಿರುವ, ತಸ್ಮಿನ್-ಅಂಥ, ಶ್ರೀ ಬಸವಾಹ್ವಯೇ–ದೈವೀಸಂಪತ್ತುಳ್ಳಬಸವೇಶ್ವರನಲ್ಲಿ,ಕಿಂವಾ-ಯಾವುದು ತಾನೇ? ಲೋಕೋತ್ತರಂ–ಲೋಕದಲ್ಲಿ ಶ್ರೇಷ್ಠವಾದ ವಸ್ತುವು,ನವಿದ್ಯತೇ–ಇರುವುದಿಲ್ಲ? ಎಂದರೆ ಆತನು ಲೋಕೋತ್ತರ ಗುಣಗಳಿಗೆ ಆಶ್ರಯನಾಗಿದ್ದಾನೆಂದು ಭಾವ.

ತಾ॥ ಪ್ರಣವರೂಪವಾದ ಅಂಕುರದಿಂದ ಹೊರಟಂಥ ಚತುರ್ವೇದ ರೂಪ ಚಿಗುರುಗಳಲ್ಲಿಯೂ, ರುದ್ರಾಗ್ನಿಶಿವಾದಿಶಬ್ದಗಳಿಂದ ಸೂಕ್ಷ್ಮವಾಗಿಯೂ, ಮತ್ತು ಯಜುರ್ವೇದದಲ್ಲಿ ವ್ಯಕ್ತರೂಪದಿಂದಲೂ, ಪರಿಶೋಭಿಸುವ ಪಂಚಾಕ್ಷರಿಯೆಂಬ ಪುಷ್ಪಮಂಜರಿಯಲ್ಲಿ ಗುಪ್ತವಾಗಿರುವ ಷಟ್‌ತ್ರಿಂಶತ್ ತತ್ತ್ವಗಳ ಅಥವಾ ತದಂತರ್ಯಾಮಿಯಾಗಿ ತದತೀತವಾಗಿರುವ, ಪರಶಿವತತ್ತ್ವವೆಂಬ ಸುಗಂಧಕ್ಕಾಗಿ ಅರ್ಥಾತ್ ಶ್ರೀ ಶಿವಜ್ಞಾನಕ್ಕಾಗಿ ಮನಸೆಳೆದು ಬಂದಿರುವ ಶಿವ ಶರಣ ಜನಸ್ತೋಮ ರೂಪವಾದ ಭ್ರಮರಪಂಕ್ತಿಯಿಂದ ಕೂಡಿರುವ ಯಾಪ ಅನಾಹತಾದಿನಾದವೆಂಬ ಲತೆಗೆ ಸಂಬಂಧಿಸಿ ಜ್ಞಾನಕ್ರಿಯಾತ್ಮಕ ಸ್ವತಂತ್ರ ಸ್ವಪ್ರಕಾಶಮಾನವಾದ ಪರಮೇಶ್ವರನ ಪರಮಕಾಂತಿರೂಪವಾದ, ಶಾಂತ್ಯಾದಿ ಪುಷ್ಪೋದ್ಯಾನದಿಂದ ಅತಿ ರಮಣೀಯವಾದ ಸ್ಥಾನದಂತಿರುವವನೂ, ಆತ್ಮ ಗುಣಗಳಿಗೆ ನಿಧಿಯಾದವನೂ ಆದ ಬಸವೇಶನಲ್ಲಿ, ಲೋಕೋತ್ತರಗಳಾದ ಯಾವ ಗುಣಗಳು ತಾನೆ ಇಲ್ಲ? ಎಲ್ಲವೂ ಇವೆ ಎಂದು ಭಾವ.

## ಕಳಿಕ ಮಧುರಗತಿ ರಘಟ

ಅಪಿಚಾಧಾರ ಸುರಂಗ ಜ್ಞಾತರಿ, ^A^ಸುಪಥಪಥಿಕ ಚಿತ್ಸುಖಸಂಧಾತರಿ, ವರ್ಗಚತುಷ್ಟಯ ದಾಪನ ಶೀಲಿನಿ, ದುರ್ಗತಿ ನಿರ^B^ಸನ ಕರುಣಾಶಾಲಿನಿ, ಶರಣಪದಾಬ್ಜಪರಾಗಲಲಾ^C^ಮನಿ, ದುರಿತನಿರಾಸ ಧುರಂಧರಭೂಮನಿ, ವೇದವಿರುದ್ಧಾಚಾರ ಪರಿದ್ವಿಷಿ, ನಾದಸುಧಾ ಪ್ರೀಣಿತಪುರವಿದ್ವಿಷಿ ||೨೫||

''ಕಿಂಫಾನ ಲೋಕೋತ್ತರಂ?'

ಟೀಕಾ–ಅಪಿಚ-ಇಷ್ಟಲ್ಲದೆ, ಆಧಾರ ಸುರಂಗ–ಮೂಲಾಧಾರಚಕ್ರದ ಗೂಢತತ್ತ್ವಮಾರ್ಗವನ್ನು, ಜ್ಞಾತರಿ–ತಿಳಿದಂಥವನೂ, ಸುಪಥ–ಸಾಧುಜನರಿಗೆ ಉಚಿತವಾದ ಮಾರ್ಗದಲ್ಲಿ, ಪಥಿಕ'-ನಡೆಯುವವರಿಗೆ, ಚಿತ್ಸುಖ-ಸ್ವತಂತ್ರಸ್ವಪ್ರಕಾಶರೂಪನಾದ ಪರಶಿವನ ಸಚ್ಚಿದಾನಂದ ಸುಖವನ್ನು, ಸಂಧಾತರಿ-ಕೊಡತಕ್ಕವನೂ, ವರ್ಗಚತುಷ್ಟಯ-ಧರ್ಮ ಅರ್ಥ ಕಾಮ ಮೋಕ್ಷಗಳನ್ನು, ದಾಪನ-ಭಕ್ತರಿಗೆ ಕೊಡಿಸುವ, ಶೀಲಿನಿ-ಸ್ವಭಾವವುಳ್ಳವನೂ, ದುರ್ಗತಿ–ದಾರಿದ್ರ್ಯವನ್ನು, ನಿರಸನ-ಹೋಗಲಾಡಿಸುವವಿಷಯದಲ್ಲಿ, ಕರುಣಾಶಾಲಿನಿ-ಕರುಣೆಯಿಂದೊಡಗೂಡಿದವನೂ, ಶರಣ-ಮಾಹೇಶ್ವರರ, ಪದಾಬ್ಜ-ಚರಣ ಕಮಲಗಳ, ಪರಾಗ-ಧೂಳಿಯೇ, ಲಲಾಮನಿ-ಭೂಷಣಪ್ರಾಯವನ್ನಾಗಿ ಉಳ್ಳವನೂ, ದುರಿತ–ಪಾಪಗಳನ್ನು, ನಿರಾಸ-ನಾಶಮಾಡುವುದರಲ್ಲಿ, ಧುರಂಧರ-ಸಮರ್ಥರಾದವರಲ್ಲಿ, ಭೂಮನಿ-ಶ್ರೇಷ್ಠನಾದಂಥವನೂ, ವೇದ-ಶ್ರುತಿಗಳಿಗೆ, ವಿರುದ್ಧ-ಪ್ರತಿಕೂಲವಾದ ಆಚಾರವಿರುವವರಿಗೆ ಪರಿದ್ವಿಷಿ-ವಿರೋಧಿಯಾದವನೂ, ನಾದ-ನಾದವೆಂಬ, ಸುಧಾ-ಅಮೃತರಸದಿಂದ, ಪ್ರೀಣಿತ-ತೃಪ್ತಿಗೊಳಿಸಿದ, ಪುರವಿದ್ವಿಷಿ-ತ್ರಿಪುರಗಳನ್ನು ನಾಶಪಡಿಸಿದ ಪರಮೇಶ್ವರನ ಸ್ವರೂಪಚಿಂತನೆಯಲ್ಲಿ ಆಸಕ್ತನಾದವನೂ, ಆದ ಬಸವಾಪ್ಪನೇ ಕಿಂವಾನ ಲೋಕೋತ್ತರಂ? ಎಂದು ಮೊದಲಿನಂತೆಯೇ ಅರ್ಥ.

ತಾ|| ಯೋಗಶಾಸ್ತ್ರದಲ್ಲಿ ಆತ್ಮಸಾಕ್ಷಾತ್ಕಾರಕ್ಕಾಗಿ ಹೇಳಿರುವ ಕಮಲದಂತಿರುವ ಮೂಲಾಧಾರಚಕ್ರದ ಮಧ್ಯದಲ್ಲಿ ಬಹುಸೂಕ್ಷ್ಮವಾಗಿ

---

A. ಕು-ಮ್ಯೆ. ಪಾ. B. ಶ.ಮ್ಯೆ. ಪಾ. C. ಮಿ-ಮ್ಯೆ. ಪಾ.

ರಹಸ್ಯವಾಗಿರುವ ಸುಷುಮ್ನಮಾರ್ಗವನ್ನರಿತು ಸುಮಾರ್ಗದಲ್ಲಿರುವ ಜನರಿಗೆ ಚಿದಾನಂದ ಸುಖವನ್ನುಂಟುಮಾಡುತ್ತಾ, ಇಹಪರಗಳಿಗೆ ಸಾಧನವಾದ ಚತುರ್ವರ್ಗವನ್ನು ಕೊಡಲು ಶಕ್ತನಾಗಿ, ಭಕ್ತರ ಬಡತನವನ್ನು ಉದಾರದಾನದಿಂದ ಹೋಗಲಾಡಿಸುವವನೂ, ಮಾಹೇಶ್ವರರ ಚರಣ ಕಮಲ ಪರಾಗವನ್ನು ಶಿರಸ್ಸಿನಲ್ಲಿ ಧರಿಸುವವನೂ, ಎಂದರೆ ಅವರನ್ನು ಈಶ್ವರಭಾವನೆಯಿಂದ ಅರ್ಚಿಸುವವನೂ, ಪಾಪಲೇಶವೂ ಇಲ್ಲದೆ ಶುದ್ಧಾಂತಃಕಣನೂ, ವೇದೋಕ್ತ ಮಾರ್ಗವನ್ನು ಮೀರಿನಡೆಯುವರನ್ನು ಶಿಕ್ಷಿಸಲು ಶಕ್ತನೂ, ಸಾಮಾದಿಗಾನವೆಂಬ ಅಮೃತದಿಂದ ಈಶ್ವರನನ್ನು ತೃಪ್ತಿಗೊಳಿಸಿದವನೂ ಆದ ಬಸವೇಶನಲ್ಲಿ ಯಾವ ಲೋಕೋತ್ತರವಾದ ಗುಣಗಳಿಲ್ಲ ? ಎಲ್ಲ ಸದ್ಗುಣಗಳೂ ಇದ್ದುವೆಂದು ಭಾವ.

ಉತ್ಕಳಿಕ

ಸುರಗಿರಿ ಮಂದರನಿರುಪಮ ಕಂದರ
ಘನ[A]ತರ ಚಂದನ ವನ[B]ಚಯ ನಂದನ
ಮಹಿಳಾ ಸಹಚರ ವಿಹರತ ಖೇಚರ
ಲಾಲಿತಸಾಮನಿ ಕೀಲಿತ ಸಾಮನಿ ॥೨೭॥

ಟೀಕಾ–ಸುರಗಿರಿ-ದೇವಸದೃಶರಾದ ಮಾನವರ ಮತ್ತು ದೇವತೆಗಳ ಸಂಚಾರಕ್ಕೆ ಉಚಿತ ಪರ್ವತವಾದ ಅಮರಗಿರಿಯು, ಹಾಗೆಯೇ, ಮಂದರ–ಮಂದರವೆಂಬ ಪರ್ವತದ, ನಿರುಪಮ-ಅಸಮಾನವಾದ, ಕಂದರ-ಗುಹೆಗಳಲ್ಲಿಯೂ, ಮತ್ತು ಆ ಪರ್ವತಗಳ ತಪ್ಪಲಲ್ಲಿಯೂ, ಘನತರ–ನಿಬಿಡವಾಗಿ ತಾನೇ ಬೆಳೆದಿರುವ, ಚಂದನ-ಶ್ರೀಗಂಧ ಬಿಲ್ವ ಮೊದಲಾದ ಶ್ರೇಷ್ಠ ವೃಕ್ಷಗಳಿಂದ ಕೂಡಿದ, ವನಚಯ-ವನಪಂಗ್ತಿ ಸಮೂಹದಿಂದ ನಂದನದಂತೆ ಮನೋಹರವಾದ ವನಗಳಲ್ಲಿಯೂ, ದೇವಲೋಕದ ನಂದನವನದಲ್ಲಿಯೂ ಸಹ, ಮಹಿಳಾಸಹಚರ–ಪತ್ನೀಸಹಿತರಾಗಿ, ವಿಹರತ-ವಿಹಾರಾಸಕ್ತರಾದ, ಖೇಚರ- ಗಗನ ಗಾಮಿಗಳಾದ ದೇವತೆಗಳಿಂದ, ಲಾಲಿತ–ಗಾನಮಾಡಿದ, ಸಾಮನಿ–ಪ್ರಸಿದ್ಧ ಸಾಮದಿಂದ ಕೂಡಿದ, ಹಾಗೂ, ಕೀಲಿತ–ತಡೆಯಲ್ಪಟ್ಟ, ಸಾಮನಿ-ಜಗದ್ವಿಖ್ಯಾತವಾದ ಸಾಮಗಾನ

A. ಹರಿ–ವ್ಯಾ. ಪಾ. B. ಮಯ-ವ್ಯಾ. ಪಾ.

ವುಳ್ಳಂಥ ಬಸವೇಶನಲ್ಲಿ ಕಿಂವಾ ನ ಲೊಕೋತ್ತರಂ? ಲೋಕದಲ್ಲಿ ಮಿಗಿಲಾದದ್ದು ಏನುತಾನೇ ಇಲ್ಲ ಎಂದರೆ ಆಮಹಾತ್ಮನಲ್ಲಿ ಉತ್ತಮವಾದ ಶಾಂತ್ಯಾದಿ ಗುಣಗಳಿದ್ದುವೆಂದು ಸಾರಾಂಶ.

ಭಾವಾರ್ಥ—ದೇವಮಾನವರ ಗೌರವಕ್ಕೂ ಸಂಚಾರಕ್ಕೂ ಯೋಗ್ಯವಾದ ಕೈಲಾಸ ಪರ್ವತ ಮತ್ತು ಮಂದರಗಿರಿಯ ಮನೋಹರವಾದ ಗುಹೆಗಳಲ್ಲಿಯೂ, ಆ ಪರ್ವತಗಳ ತಪ್ಪಲಲ್ಲಿಯೂ, ದಟ್ಟವಾಗಿ ಬೆಳೆದಿರುವ ಶ್ರೀಗಂಧ ಬಿಲ್ವ ಮೊದಲಾದ ಉತ್ತಮಜಾತಿಯ ವೃಕ್ಷಗಳಿಂದ ಕೂಡಿ ನಂದನವನದಂತಿರುವ ವನಶ್ರೇಣಿಗಳಲ್ಲಿಯೂ, ದೇವಲೋಕದ ನಂದನವನದಲ್ಲಿಯೂ ಸಹ ಪತ್ನೀಸಹಿತರಾಗಿ ವಿಹಾರಾಸಕ್ತರಾದ ದೇವಮಾನವರು ಆ ಸಮಯದಲ್ಲಿ ಸಾಮಗಾನವನ್ನು ಮಾಡದೆ, ಅವರೆಲ್ಲರೂ ಮುಕ್ತಕಂಠದಿಂದಲೂ ಭಕ್ತಿಯಿಂದಲೂ ಶ್ರೀ ಬಸವೇಶನ ಮಹಿಮೆಯನ್ನು ಗಾನಮಾಡುತ್ತಿದ್ದರು. ಆದ್ದರಿಂದ ಬಸವೇಶನಲ್ಲಿ ಲೋಕೋತ್ತರವಾದ ಶ್ರೇಷ್ಠವಾದ ಗುಣಗಳಿದ್ದುವೆಂದು ಭಾವವು.

ಕವಿಯು ಶ್ರೀ ಶಿವಯೋಗದ ರೀತಿಯನ್ನು ಬಲ್ಲವನಾದುದರಿಂದ ಆ ಸರಣಿಯಲ್ಲಿ ಸಂಬೋಧನ ಎಂಬ ವಿಭಕ್ತಿಯಲ್ಲಿ ಸ್ತುತಿಸುತ್ತಾನೆ:

### ಸಂಬೋಧನ ಪ್ರಥಮಾ ವಿಭಕ್ತಿಃ

ಶಾ॥ ಮೂಲಾಧಾರ ವಿಕಸ್ವರಾಂಬುಜವನೀಮಧ್ಯಸ್ಫುರದ್ವೀಚಿಕಾ
ಯಾತಾಯಾತ ವಿನೋದಪೇಶಲಮತೇ! ಚಿದ್ವ್ಯೋಮಶೀತದ್ಯುತೇ!
ಸಂಸಾರಾರ್ಣವ ಕರ್ಣಧಾರ! ಕೃಪಯಾ ಮಾಂ ಪಾಲಯ ಪ್ರತ್ಯಹಂ
ಭಾಂಡಾಗಾರ ಧುರಂಧರೇಶ! ಬಸವಾಮಾತ್ಯೇಶ ಚೂಡಾಮಣೇ! ॥೨೭॥

ಟೀಕಾ—ಮೂಲಾಧಾರ-ಮೂಲಾಧಾರವೆಂಬ, ಸ್ಥಾನ-ಚಕ್ರದಲ್ಲಿ, ವಿಕಸ್ವರ—ವಿಕಸನಶೀಲವಾದ, ಅಂಬುಜವನೀ-ಕಮಲ ವನಸ್ಥಳದ, ಮಧ್ಯ-ಮಧ್ಯದಲ್ಲಿ, ಸ್ಫುರತ್-ಸ್ಫುರಿಸುವಂಥ, ವೀಚಿಕಾ—ತರಂಗಮಾಲೆಯ, ಯಾತಾಯಾತ-ಗಮನಾಗಮನವನ್ನು ಎಂದರೆ ಹೋಗಿ ಬರುವಿಕೆಯೆಂಬ, ವಿನೋದ-ವಿನೋದಕಾರ್ಯದಲ್ಲಿ. ಪೇಶಲಮತೇ!-ಕೋಮಲವಾದ ಬುದ್ಧಿಯುಳ್ಳವನೇ!

ಚಿದ್ವ್ಯೋಮ-ಜ್ಞಾನಾಕಾಶದಲ್ಲಿ ರಾಜಿಸುವ, ಶೀತದ್ಯುತೇ ?–ಚಂದ್ರನಂತಿರುವ ವನೇ ! ಸಂಸಾರಾರ್ಣವ–ಜನ್ಮ ಜರಾಮರಣ ರೂಪವಾದ ಭವಸಾಗರವನ್ನು ದಾಟಿಸುವ, ಕರ್ಣಧಾರ! -ನಾವಿಕನಂತಿರುವವನೇ! ಭಾಂಡಾಗಾರಧುರಂಧ ರೇಶ !–ಭಂಡಾರಗೃಹದಲ್ಲಿ ಅಗ್ರೇಸರನಾದವನೇ! ಅಮಾತ್ಯೇಶ ಚೂಡಾಮಣೇ! ಮಂತ್ರೀಶ್ವರರಲ್ಲಿಶಿರೋರತ್ನದಂತಿರುವವನೆ,ಬಸವ-ಬಸವೇಶನೇ!ಪ್ರತ್ಯಹಂ-ಪ್ರತಿ ದಿನದಲ್ಲಿಯೂ, ಮಾಂ–ನನ್ನನ್ನು, ಕೃಪಯಾ-ದಯೆಯಿಂದ, ಪಾಲಯ-ರಕ್ಷಿಸು.

ಭಾವಾರ್ಥ—ಯೋಗಶಾಸ್ತ್ರದಲ್ಲಿ ಆತ್ಮಾನುಸಂಧಾನಕ್ಕಾಗಿ ಹೇಳಿರುವ ಸುಷುಮ್ನೆಯ ಮೂಲದಲ್ಲಿ ಕಮಲದಂತಿರುವ ಮೂಲಾಧಾರ ಚಕ್ರಮಧ್ಯದಿಂದ ಕುಂಡಲಿನಿಯು ಹೊರಟು, ಸಹಸ್ರಾರ ಕಮಲ ಮಧ್ಯ ವಿರಾಜಮಾನ ಚಂದ್ರ ಬಿಂಬದಲ್ಲಿರುವ ಶ್ರೀಶಿವಶಕ್ತಿಯ ಚರಣಾಮೃತವು ಸಾಧಕನ ಸಮಸ್ತ ಶರೀರ ವನ್ನು ಸೇಚನಮಾಡಿ, ಅದು ಪುನಃ ಸುಷುಮ್ನೆಯನ್ನು ಅವಲಂಬಿಸುತ್ತದೆ. ಹೀಗೆ ಕುಂಡಲನಿಯ ಗಮನಾಗಮನ ವಿನೋದದಲ್ಲಿ ಕುಶಲಮತಿಯೂ, ಮತ್ತು ಹೃದಯ ಕಮಲದ ಮೇಲಿರುವ ಸೂರ್ಯಮಂಡಲವನ್ನು ಭೇದಿಸಿಕೊಂಡು ಬ್ರಹ್ಮಬಿಲವನ್ನು ಮುಚ್ಚಿಕೊಂಡು, ಸಹಸ್ರಾರ ಕಮಲಮಧ್ಯದಲ್ಲಿರುವ ಅಮೃತ ರಸವನ್ನು ದ್ರಾವಿಸುವ ಶಕ್ತಿವಂತನೂ, ಆದುದರಿಂದ ಜನನ ಜರಾಮರಣ ರೂಪ ವಾದ ಭವಸಾಗರವನ್ನು ದಾಟಿಸುವುದರಲ್ಲಿ ನಾವಿಕನಂತಿರುವವನೂ, ಭಂಡಾರ ಕಾರ್ಯದಲ್ಲಿ ಪ್ರವೀಣನೂ, ಮಂತ್ರೀಶ್ವರರಲ್ಲಿ, ಅಗ್ರೇಶ್ವರನೂ ಆದ ಬಸವೇಶನು ಯಾವಾಗಲೂ ಕೃಪೆಯಿಂದ ಕಾಪಾಡು.

ಕಳಿಕ ದ್ವಿರದಗತಿ ರಘಟ

ಅಪಿಚಪಾಲಿತ ವೀರಶೈವವ್ರತಾಚಾರ!
ಕೃಪಣಜನರಕ್ಷಣ ಕೃತಕರಣವ್ಯಾಪಾರ!
ಸಿತಯಶಃಕರ್ಪೂರ ವಾಸಿತಬ್ರಹ್ಮಾಂಡ!
ಮಿಹಿರಹಿತಕಿಲ್ಬಿಷಾಂಬುಜಷಂಡವೇತಂಡ!
ಭುಜಗನರಸುರ ಗರುಡ ಖಚರ ಕಿನ್ನರಸಾಧ್ಯ!

ನಿಜಗುಣಶ್ರವಣತೋಷಿತ ಪಂಡಿತಾರಾಧ್ಯ!
ಶತಮುಖತರುಸ್ಫೀತ ಗಣಪರಿಷದುತ್ಕಂಠ!
ತತವಿತತಘನ ಸುಷಿರಕೀರ್ತಿತಶ್ರೀಕಂಠ! ||೨೮||

ಟೀಕಾ-ಅಪಿಚ-ಮತ್ತು, ಪಾಲಿತ-ಪಾಲಿಸಿದ, ವೀರಶೈವ ವೀರ ಮಾಹೇಶ್ವರರ ಶಿವಧರ್ಮ ಶಾಸ್ತ್ರೋಕ್ತವಾದ, ವ್ರತಾಚಾರ!-ಶಿವವ್ರತಗಳ ಆಚಾರದಿಂದ ಕೂಡಿದ, ಕೃಪಣಜನ-ದೀನಜನರ, ರಕ್ಷಣ-ರಕ್ಷಿಸುವಲ್ಲಿ, ಕೃತ-ಮಾಡಿದ, ಕರಣ-ಕರಾದಿ ಇಂದ್ರಿಯಗಳ, ವ್ಯಾಪಾರ! ವ್ಯಾಪಾರದಲ್ಲಿ ನಿರತನಾದವನೂ, ಸಿತ-ಶುಭ್ರವಾದ, ಯಶಃ-ಕೀರ್ತಿಯೆಂಬ, ಕರ್ಪೂರ-ಕರ್ಪೂರದಿಂದ, ವಾಸಿತ-ಸುವಾಸನೆಗೊಳಿಸಿದ, ಬ್ರಹ್ಮಾಂಡ!-ಬ್ರಹ್ಮಾಂಡಗಳುಳ್ಳಂಥವನೂ, ಮಿತಿರಹಿತ-ಅಧಿಕವಾದ ಕಿಲ್ಬಿಷ-ಪಾಪವನ್ನು ತೊಲಗಿಸುವಲ್ಲಿ, ಅಂಬುಜಷಂಡ-ಕಮಲಗಳ ಗುಂಪಿಗೆ, ವೇತಂಡ!-ಗಜಸ್ವರೂಪದಂತಿರತಕ್ಕವನೂ, ಭುಜಗವರ-ಆದಿಶೇಷ, ಸುರ-ದೇವತೆಗಳು, ಗರುಡ-ಗರುಡನು, ಖಚರ-ಆಕಾಶಗಾಮಿಗಳಾದ ದೇವತೆಗಳು, ಕಿನ್ನರ-ಕಿಂಪುರುಷರು ಇವರಿಂದ, ಸಾಧ್ಯ!-ಸಾಧಿಸಲು ಯೋಗ್ಯವಾದಂಥ, ನಿಜಗುಣ-ತನ್ನ ಶಾಂತ್ಯಾದಿಗುಣಗಳ, ಶ್ರವಣ-ಕೇಳಿದ ಮಾತ್ರದಿಂದ, ತೋಷಿತ-ಆನಂದಗೊಳಿಸಿದ, ಪಂಡಿತಾರಾಧ್ಯ! ಪಂಡಿತರ ಪೂಜೆಗೆ ಅರ್ಹನಾದವನೂ, ಮತ್ತು ಪಂಡಿತಾರಾಧ್ಯನುಳ್ಳಂಥವನೂ, ಶತಮುಖ-ಇಂದ್ರನ, ತರು-ಕಲ್ಪವೃಕ್ಷದಂತೆ, ಸ್ಫೀತ-ಅಧಿಕಶ್ರೇಷ್ಠವಾದ, ಗಣಪರಿಷತ್-ಶ್ರೀ ಮಾಹೇಶ್ವರರೆಂಬ ಪ್ರಮಥರ ಸಮಿತಿಯಲ್ಲಿ, ಉತ್ಕಂಠ-ಅಧಿಕವಾದ ಅನುರಾಗದಿಂದ ಕೂಡಿದವನೂ, ತತ-ವ್ಯಾಪ್ತವೂ, ವಿತತ-ವಿಸ್ತಾರವೂ, ಘನ-ನಿಬಿಡವೂ ಆದ, ಸುಷಿರ-ಕಂಠನಾಳದಿಂದ, ಕೀರ್ತಿತ-ಕೀರ್ತಿಸಿದ, ಶ್ರೀಕಂಠ!-ಶ್ರೀಕಂಠವುಳ್ಳಂಥ, ಬಸವಾಮಾತ್ಯೇಶ! ಮಂತ್ರಿಶ್ರೇಷ್ಠನಾದ-ಬಸವೇಶನೇ, ಮಾಂಪಾಲಯ-ನನ್ನನ್ನು ಕಾಪಾಡು.

ಭಾವಾರ್ಥ:-ಮಾಹೇಶ್ವರರಿಗೆ ಅತ್ಯಂತ ಮಾನ್ಯವಾದ ಶಿವರಹಸ್ಯ, ಶಿವಧರ್ಮ, ಶಿವಾಗಮಗಳಲ್ಲಿ ಉಕ್ತವಾಗಿರುವ ಶಿವವ್ರತ ಶಿವಜ್ಞಾನ ಶಿವಭಕ್ತಿ ಶಿವಪೂಜೆಗಳ ಆಚರಣೆಯಲ್ಲಿ ನಿರತನೂ, ದೀನರನ್ನು ರಕ್ಷಿಸುವುದರಲ್ಲಿ ಕಾಯಕರಣಗಳನ್ನು ವಿನಿ

ಯೋಗಿಸಿದವನೂ, ಕರ್ಪೂರದಂತೆ ಶುದ್ಧವಾದ ಕೀರ್ತಿಯಿಂದ ಬ್ರಹ್ಮಾಂಡವನ್ನು ವ್ಯಾಪಿಸಿದವನೂ, ಅಪಾರವಾದ ಪಾಪರಾಶಿಯನ್ನು ಹೋಗಲಾಡಿಸುವಲ್ಲಿ ಕಮಲವನವನ್ನು ತುಳಿಯುವ ಆನೆಯಂತೆ ಶಕ್ತನೂ, ಆದಿಶೇಷ ದೇವತೆ ಗರುಡ ಖೇಚರ, ಕಿನ್ನರ ಇವರಿಗೂ ಸಾಧಿಸಲು ಬೇಕಾದವನೂ, ಶಾಂತ್ಯಾದಿ ಆತ್ಮಗುಣ ಗಳನ್ನು ಕೇಳಿದ ಮಾತ್ರದಿಂದ ತೃಪ್ತಿಗೊಂಡ ಪಂಡಿತರಿಗೆ ಮಾನ್ಯನೂ ಅಲ್ಲದೆ ತನ್ನ ಗುಣಗಳಿಂದ ಮಲ್ಲಿಕಾರ್ಜುನ ಪಂಡಿತಾರಾಧ್ಯರನ್ನು ಆನಂದ ಪಡಿಸಿ ದವನೂ, ಕಲ್ಪವೃಕ್ಷದಂತೆ ಪರಮ ಮಾಹೇಶ್ವರಪ್ರಮಥರ ಸಮಿತಿಯಲ್ಲಿ ಹೆಚ್ಚು ಭಕ್ತಿ ಶ್ರದ್ಧಾನುರಾಗವಿರುವವನೂ, ಪ್ರಖ್ಯಾತವೂ ವಿಶಾಲವೂ ಆದ ಕಂಠ ದಿಂದ ಶ್ರೀ ಕಂಠನನ್ನುನುತಿಸಿ ಅವನ ಅನುಗ್ರಹಕ್ಕೆ ಪಾತ್ರನೂ, ಭಂಡಾರದಲ್ಲಿ ಪ್ರವೀಣನೂ, ಮಂತ್ರೀಶ್ವರರಲ್ಲಿ ಅಗ್ರೇಸರನೂ ಆದ ಬಸವೇಶನೇ ಯಾವಾ ಗಲೂ ನನ್ನನ್ನು ದಯೆಯಿಂದ ಕಾಪಾಡು.

### ಉತ್ಕಳಿಕ

ಶುಕಮುಖ ಮನೋಗಮ್ಯ! ವಿಕಚಗುAಣ ಗಣತಾಮ್ಯ!
ಅBಲ್ಲಮಪ್ರಭು ಸತ್ಯ ಸಲ್ಲಪನ ಸಾಂಗತ್ಯ !
ಸಾಧಿತ ಸ್ವಾತ್ಮಾವ ಬೋಧ ನಿಜಸದ್ಭಾವ !
ಶಿವತತ್ತ್ವವಿಸ್ತಾರ ! ಭCಕ್ತಿಪಥ ನಿಸ್ತಾರ! ॥೨೯॥

ಟೀಕಾ—ಶುಕಮುಖ—ಶುಕಋಷಿಯೇ ಮೊದಲಾದವರ, ಮನೋಗಮ್ಯ!— ಮನಸ್ಸಿಗೆ ಗೋಚರವಾಗುವ, ವಿಕಚ—ಸುವ್ಯಕ್ತವಾಗಿ ಕಾಣುವ, ಗುಣಗಣ- ಶಾಂತ್ಯಾದಿ ಆತ್ಮಗುಣಗಳನ್ನು, ತಾಮ್ಯ!-ಆಕಾಂಕ್ಷಿಸುವ, ಅಲ್ಲಮಪ್ರಭು— ಪ್ರಭುದೇವರ, ಸತ್ಯಸಲ್ಲಪನ-ಸತ್ಯವೂ ನಿತ್ಯವೂ ಆದ ಶ್ರೀಶಿವತತ್ತ್ವ ಬೋಧದ ವಿಷಯವಾದ ಅಮೃತ ವಾಣಿಗಳ ಶ್ರವಣದ, ಸಾಂಗತ್ಯ-ನಿರಂತರವೂ ಸಂಬಂಧ ವನ್ನು ಗಳಿಸಿರುವ, ಸಾಧಿತ—ಸಾಧಿಸಿಕೊಂಡಿರುವ, ಸ್ವಾತ್ಮಾವಬೋಧ-ಸ್ವಕೀಯ ಆತ್ಮಜ್ಞಾನದಿಂದ, ನಿಜ-ತನ್ನ, ಸದ್ಭಾವ-ಸತ್ಸ್ವಭಾವವನ್ನು ಪಡೆದಿರುವ, ಶಿವ

A ಕರುಣಾ ಕಾ-ಮೈ.ಪಾ. B.ದ.ಆಂ.ಪಾ. C ಭ ವ-ಮೈ. ಪಾ.

ತತ್ತ್ವ-ಶ್ರೀ ಶಿವತತ್ತ್ವದ, ವಿಸ್ತಾರ-ವಿಸ್ತಾರ ರೂಪನಾದ, ಭಕ್ತಿಪಥ-ಶ್ರೀ ಶಿವ ಶಿವಜ್ಞಾನಾದಿಭಕ್ತಿ ಮಾರ್ಗವನ್ನು ಜನತೆಗೆ ತೋರಿಸಿ ಕೊಟ್ಟಂಥ,ಅಮಾತ್ಯೇಶ-ಬಸವ! ಕೃಪಯಾ ಪ್ರತ್ಯಹಂ ಮಾಂಪಾಲಯ-ಎಂದು ಹಿಂದಿನಂತೆಯೇಅರ್ಥ!

ಭಾವಾರ್ಥ—ಶುಕಋಷಿಯೇ ಮೊದಲಾದ ಮಹರ್ಷಿಗಳ ಮನಸ್ಸಿಗೆ ಗಮ್ಯನೂ,ಶಾಂತ್ಯಾದಿ ಗುಣಗಣಗಳನ್ನು ಆಕಾಂಕ್ಷಿಸುತ್ತಿರುವವನೂ ಪ್ರಭುದೇವ ಮುಂತಾದವರು ನಿತ್ಯವೂ ಬೋಧಿಸಿರುವ ಶಿವತತ್ತ್ವ ವಿಷಯವಾದ ಅಮೃತ ವಾಣಿಗಳನ್ನು ನಿರಂತರ ಶ್ರವಣಮಾಡುವವನೂ, ಶ್ರವಣ ಮನನ ನಿಧಿಧ್ಯಾಸಗ ಳಿಂದ ಸಾಧಿಸಿಕೊಂಡಿರುವ ಆತ್ಮತತ್ತ್ವಜ್ಞಾನದಿಂದ ಕೂಡಿದವನೂ, ಹಾಗೂ ಅದೇ ಜ್ಞಾನವನ್ನು ಸಕಲರಿಗೂ ತಿಳಿಸಿ ಕೊಡಬೇಕೆಂಬ ಉದಾತ್ತ ಭಾವನೆ ಯಿಂದ ಶ್ರೀಶಿವಜ್ಞಾನ ಶಿವಪೂಜೆಶಿವವ್ರತಾದಿ ಶಿವ ರಹಸ್ಯಾದಿಶಾಸ್ತ್ರೋಕ್ತವಾಗಿ ರುವ ಧರ್ಮಗಳ ಪ್ರಚಾರದಲ್ಲಿ ನಿರತರನಾಗಿಯೂ,ಮುಕ್ತಿಮಾರ್ಗಕ್ಕೆ ಸಾಧನಗ ಳಾದ ಭಕ್ತಿಜ್ಞಾನವೈರಾಗ್ಯಗಳಲ್ಲಿ ಭಕ್ತಿಯು ಸಮಸ್ತಜನತೆಗೆ ಸುಲಭವಾದು ದೆಂದು ತಿಳಿದು ತಾನೇ ಆಚರಿಸಿ ಬೋಧಿಸಿ ಭಕ್ತಿಭಂಡಾರಿ ಎಂಬ ಹೆಸರಾಂತ ವನಾಗಿಯೂ ಇರುವ ಬಸವೇಶನು ಯಾವಾಗಲೂ ಕಾಪಾಡಲೆಂದು ಸಂ. ಪ್ರ. ವಿಭಕ್ತಿಯಲ್ಲಿ ಪ್ರಾರ್ಥಿಸಿರುತ್ತಾನೆ.

## ಸಾರ್ವವಿಭಕ್ತಿಕಮ್

ಯಸ್ಸಂಗೀತನಿಧಿಃ, ಯಮಾಹುರಭವಂ, ಯೇನಾರ್ಜಿತಂಸೂನೃತಮ್
ಯಸ್ಮೈಸ್ವಸ್ತಿ, ಯತಸ್ತದೀಯಮುದಭೂತ್ ಯದ್ವೀರಶೈವವ್ರತ ಮ್
ಯಸ್ಯಾಪಾಂಗಸಹೋದರೀಚ ಕರುಣಾ, ಯಸ್ಮಿನ್ಮಹತ್ತ್ವಾಧಿಕಮ್,
ಸತ್ವಂ ತ್ರೀಣಿ ಜಗಂತಿ ಪಾಹಿ ಬಸವಾಮಾತ್ಯೇಶ ಚೂಡಾಮಣೇ! ||೩೦||

ಟೀಕಾ—ಯಃ-ಯಾವ ಬಸವೇಶನು, ಸಂಗೀತನಿಧಿಃ-ಸಂಗೀತ ಶಾಸ್ತ್ರದ ಲ್ಲಿಯೂ ಸಾಮಗಾನದಲ್ಲಿಯೂ ನಿಪುಣನೋ, ಯಂ-ಯಾವನನ್ನು, ಅಭವಂ-ಹುಟ್ಟು ಸಾವುಗಳಿಲ್ಲದ ಶಿವರೂಪಿ ಎಂದು, ಆಹುಃ-ಹೇಳುತ್ತಾರೆಯೋ, ಯೇನ-ಯಾವನಿಂದ, ಸೂನೃತಂ-ಸತ್ಯವೂ ಮಿತವೂ ಹಿತವೂ ಆದ ವಚನವು,

ಆರ್ಜಿತಂ-ಗಳಿಸಿಕೊಳ್ಳಲ್ಪಟ್ಟಿತೋ, ಯಸ್ಮೈ-ಯಾವನಿಗೋಸ್ಕರ,ಸ್ವಸ್ತಿ-ಶುಭವನ್ನು ಮಹಾ ಮಾಹೇಶ್ವರರು ಬಯಸುತ್ತಾರೋ, ಯತ್-ಯಾವ, ವೀರಶೈವವ್ರತಂ-ಶಿವಧರ್ಮದ ಶಿವಪೂಜಾದಿ ವ್ರತಸಮುದಾಯವು, ತದೀಯ-ಅದರ ಪ್ರಚಾರವು, ಯತಃ-ಯಾವನಿಂದ, ಉದಭೂತ್-ಉಂಟಾಯಿತೋ, ಯಸ್ಯ-ಯಾವ ಬಸವೇಶನಿಗೆ, ಕರುಣಾ-ಕರುಣೆಯು, ಅಪಾಂಗ-ಕಟಾಕ್ಷದ, ಸಹೋದರೀಚ-ಸೋದರಿಯಾಗಿರುವಳೋ, ಯಸ್ಮಿನ್-ಯಾವ ಬಸವೇಶನಲ್ಲಿ, ಮಹತ್ವಾಧಿಕಂ-ಮಹತ್ವದ ಹೆಚ್ಚಳವುಂಟೋ ? ಅಂಥ, ಬಸವಾಮಾತ್ಯೇಶಚೂಡಾಮಣೇ!-ಮಂತ್ರೀಶ್ವರನಾದ ಬಸವೇಶನೇ! ಸಃ-ಆ, ತ್ವಂ-ನೀನು, ತ್ರೀಣಿ ಜಗಂತಿ-ಮೂರು ಲೋಕಗಳನ್ನು, ಪಾಹಿ-ರಕ್ಷಿಸು.

ಭಾವಾರ್ಥ—ಯಾವ ಬಸವೇಶನು ಸಂಗೀತ ಮತ್ತು ಸಾಮಗಾನದಲ್ಲಿ ನಿಪುಣನಾಗಿದ್ದನೋ,ಯಾವನನ್ನು ಅಭವನೆಂದುಹೇಳುತ್ತಾರೆಯೋ ಮತ್ತು ಯಾರಿಂದ "ಸತ್ಯಂಭ್ರೂಯಾತ್ ಪ್ರಿಯಂಬ್ರೂಯಾತ್ ನಬ್ರೂಯಾತ್ ಸತ್ಯಮಪ್ರಿಯಂ" ಎಂಬಂತೆ ಸತ್ಯವೂ ಹಿತವೂ ಮಿತವೂ ಆದ ವಚನವು ಆರ್ಜಿತವಾಗಿದ್ದಿತೋ? ಯಾವನಿಗಾಗಿ ಶುಭವಾಗಲೆಂದು ಶಿವಜ್ಞಾನಿಗಳು ಹಾರೈಸುತ್ತಾರೆಯೋ,ಮತ್ತು ಯಾರಿಂದ ವೀರಶೈವ ಅಥವಾ ಮಾಹೇಶ್ವರರಿಗೆ ಅಭಿಮತವಾದ ಶಿವಾದ್ವೈತಕ್ಕೆ ಸಂಬಂಧಿಸಿದ ಶ್ರೀ ಶಿವರಹಸ್ಯ-ಮಾಹೇಶ್ವರಖಂಡಾದಿ ಶಿವಧರ್ಮ ಶಾಸ್ತ್ರೋಕ್ತ ಶಿವಜ್ಞಾನಾದಿ ವ್ರತಸಮುದಾಯ ಮತ್ತು ಪ್ರಚಾರವೂ ಸಹ ಲೋಕದಲ್ಲಿ ವಿಸ್ತಾರವಾಯಿತೋ, ಮತ್ತು ದಯೆಯು ಯಾವನ ಕಟಾಕ್ಷಕ್ಕೆ ಸಹೋದರಿಯಾಗಿದ್ದಳೋ, ಯಾವ ಬಸವೇಶನಲ್ಲಿ ಹೆಚ್ಚಾದ ಮಹಿಮೆಯು ಇದ್ದಿತೋ ಅಂತಹ ಬಸವೇಶನೇ! ನೀನು ಮೂರು ಜಗತ್ತುಗಳನ್ನೂ ರಕ್ಷಿಸು.

ಹೀಗೆ ಕವಿಯು ಏಳು ವಿಧವಾದ ವಿಭಕ್ತಿಗಳಲ್ಲಿಯೂ ಶ್ರೀ ಬಸವೇಶನನ್ನು ಸ್ತುತಿಸಿ, ತಾನು ರಚಿಸಿದ 'ಶ್ರೀ ಬಸವೋದಾಹರಣಂ' ಎಂಬ ಗ್ರಂಥಕ್ಕೆ ಮಂಗಳವಾಗಲೆಂಬ ಆಶೆಯಿಂದ "ಮಂಗಳಾಂತಾನಿ ಶಾಸ್ತ್ರಾಣಿ" ಎಂಬ ಉಕ್ತಿಯಂತೆ ಗ್ರಂಥದ ಕಡೆಯಲ್ಲಿ ಆರ್ಯಾವೃತ್ತದಲ್ಲಿ ಆಶೀರ್ವಾದ ರೂಪವಾದ ಮಂಗಳವನ್ನು ಮಾಡಿರುತ್ತಾನೆ.

ಆ॥ವೃ॥ ಶ್ರೀ ಬಸವರಾಜ ಗುಣಮಣಿ
ಖಚಿತಂ ಜಯತಾತ್ ಸುವರ್ಣಮೇತತ್
ಸೋಮಸುಕವಿ ನಾ ರಚಿತಂ
ಹೃದಯಾಭರಣಮ್ A ಸದಾಮುದಾಹರಣಮ್ ॥

ಇತಿ ಸಂಸ್ಕೃತಾದಿ[B]ನಾನಾಭಾಷಾವಿಶಾರದ[B]ಶ್ರೀ ಪಾಲ್ಕುರಿಕೆ ಸೋಮನಾಥ ಮಹಾಕವಿ ವಿರಚಿತಂ ಉದಾಹರಣ ಪದ್ಯಂ ಸಮಾಪ್ತಂ.

ಟೀಕಾ- ಶ್ರೀ-ದೈವಿಕಸಂಪತ್ತಿನಿಂದಕೂಡಿದ, ಬಸವರಾಜ-ಬಸವೇಶನ, ಗುಣ-ಶಮ ದಮ ಭಕ್ತಿಜ್ಞಾನ ವೈರಾಗ್ಯಾದಿ ಸಮಸ್ತ ಆತ್ಮಗುಣಗಳಿಂದ, ಖಚಿತಂ-ಕೆತ್ತಿದ, ಎಂದರೆ (ರಚಿಸಿದಂಥ) ಸುವರ್ಣಂ-ಸಕಲಜನ ಗ್ರಾಹ್ಯವಾಗಿ ಉಚಿತಗಳಾದ ಅಕ್ಷರಗಳಿಂದ ಕೂಡಿದ ಆದ್ದರಿಂದಲೇ ಮಣಿಗಳಿಂದ ಕೆತ್ತಿದ ವರ್ಣಾಭರಣದಂತೆ ಚಿನ್ನದಂತೆ ಸಕಲಜನ ಗ್ರಾಹ್ಯವಾದ, ಮುದಾಹರಣಂ-ಸಂತೋಷವನ್ನೀಯುವ, ಹೃದಯಾಭರಣಂ-ಹೃದಯಕ್ಕೆ ಭೂಷಣದಂತಿರುವ, ಸೋಮಸುಕವಿನಾ-ಸೋಮನಾಥನೆಂಬ ಕವಿಯಿಂದ, ರಚಿತಂ-ರಚಿತವಾದ, ಏತತ್-ಈ, ಉದಾಹರಣಂ-ಬಸವೋದಾಹರಣವು, ಸದಾ-ಯಾವಾಗಲೂ ಆ ಚಂದ್ರಾರ್ಕಪರ್ಯಂತವಾಗಿ, ಜಯತಾತ್-ಜಯಶಾಲಿಯಾಗಿರಲಿ.

'ಜಯತಾತ್' ಎಂಬ ಕ್ರಿಯಾಪದವು; ಜಿ-ಜಯೇ ಎಂಬ ಧಾತುವಿನ ಲೋಟ್-(ಲಕಾರದ) ರೂಪವಾಗಿ ಆಶೀರ್ವಾದವನ್ನು ಸೂಚಿಸುತ್ತದೆ. ಈ ಪದ್ಯವು ಆರ್ಯಾವೃತ್ತದಲ್ಲಿಯೇ ಇದ್ದು ಮಾಲಿನೀ ಮುಂತಾದ್ದರಂತೆ ಅಕ್ಷರ ಛಂದಸ್ಸಲ್ಲ. ಆದರೆ ಮಾತ್ರಾ ಛಂದಸ್ಸಾಗಿದೆ. ಇದರಲ್ಲಿ ಒಂದು ಮತ್ತು ಮೂರನೆಯ ಪಾದದಲ್ಲಿ ೧೨ ಮಾತ್ರೆಗಳೂ, ಹಾಗೇಯೇ ಎರಡನೇ ನಾಲ್ಕನೇ ಸಾಲುಗಳಲ್ಲಿ ೧೫ ಮಾತ್ರೆಗಳೂ ಇರುತ್ತವೆ.

---

A. ಸದಾ-ಪಾ B. ಗ-ಸ್ಯೈ. ಪಾ.

ಭಾವಾರ್ಥ—ದೈವಿಕಸಂಪತ್ತಿನಿಂದ ಕೂಡಿದ ಬಸವರಾಜನ ಶಮ ದಮ ಭಕ್ತಿಜ್ಞಾನ ವೈರಾಗ್ಯಗಳೆಂಬ ಆತ್ಮಗುಣಗಳಿಂದ ಕೂಡಿ, ಸುವರ್ಣಕ್ಕೆ ಸಮಾನವಾದ ಅಕ್ಷರಗಳಿರುವುದರಿಂದ ಮಣಿಗಳಿಂದ ರಚಿತವಾದ ಸುವರ್ಣ ಆಭರಣದಂತೆ ಸಕಲಜನ ಸಂಗ್ರಾಹ್ಯವಾಗಿರುವ ಸೋಮನಾಥನೆಂಬ ಕವಿಯಿಂದ ರಚಿತವಾದದ್ದಾಗಿ ಸಂತೋಷವನ್ನೀಯುವ ಹೃದಯಾಭರಣವಾಗಿರುವ ಈ ಬಸವೋದಾಹರಣ ಗ್ರಂಥವು ಯಾವಾಗಲೂ ಜಯಶಾಲಿಯಾಗಿರಲಿ ಎಂದು ಹೇಳಿ ಗ್ರಂಥವನ್ನು 'ಮಂಗಳಾಂತಾನಿ' ಎಂಬಂತೆ ಪೂರ್ಣಮಾಡಿರುತ್ತಾನೆ.

ಟಿಪ್ಪಣಿ ಕರ್ತಾ: ತಾವರೆಕೆರೆ ಮಾಹೇಶ್ವರ ಮಠಾಧೀಶ, ನವೀನ ನ್ಯಾಯ ವ್ಯಾಕರಣ ವಿದ್ವಾನ್ ಟಿ. ಆರ್. ವಿರೋಚನ ಶರ್ಮಾ, ಶ್ರೀ ಶಿವಾದ್ವೈತ ವೇದಾಂತ ಅಸಿಸ್ಟೆಂಟ್ ಪ್ರೊಫೆಸರ್, ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜ್, ಬೆಂಗಳೂರು ನಗರ.

॥ ಮಂಗಲಂ ॥





ಶ್ರೀ ಸಂಗಮೇಶ್ವರ ದೇವಾಲಯ, ಕೂಡಲ ಸಂಗಮಕ್ಷೇತ್ರ.

ಅನುಬಂಧ-೧.

# ಕವಿ-ಕಾವ್ಯ ವಿಚಾರ

ಶ್ರೀ ಬಸವೋದಾಹರಣವ್ ಎಂಬ ಈ ಗ್ರಂಥವನ್ನು ಸಂಸ್ಕೃತ ಮತ್ತು ಆಂಧ್ರಭಾಷೆಗಳಲ್ಲಿ ಪ್ರಖ್ಯಾತ ಕವಿಯೆನಿಸಿರುವ ಪಾಲ್ಕುರಿಕೆ ಸೋಮನಾಥನು ಬರೆದಿರುವನು. ಇದುವರೆಗೆ ಪ್ರಕಟವಾಗದಿದ್ದ ಈ ಅಮೌಲ್ಯವಾದ ಸಂಸ್ಕೃತಗ್ರಂಥವನ್ನು ಆಂಧ್ರಸಾಹಿತ್ಯ ಪರಿಷತ್ತಿನವರು ಸಂಗ್ರಹಿಸಿ, ಸಂಸ್ಕರಿಸಿ ಶ್ರೀ ಬಂಡಾರು ತಮ್ಮಯ್ಯ ಮತ್ತು ಶ್ರೀ ನಿ. ವೆಂಕಟರಾವ್ ಎಂಬ ವಿದ್ವಾಂಸರ ಸಹಾಯದಿಂದ (ಸಂ. ೩೨. ಸಂ. ೩. ಮತ್ತು ೪ ರ ಆಂಧ್ರಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ) ಪ್ರಕಟಿಸಿರುತ್ತಾರೆ. ಅದನ್ನು ಶರಣ ಸಾಹಿತ್ಯ ಗ್ರಂಥ ಮಾಲೆಯಲ್ಲಿ ಪ್ರಕಟಿಸಲಾಗಿದೆ. ಈ ಗ್ರಂಥದ ತಾಳೆಯ ಪ್ರತಿಯು ಮದರಾಸು ಪ್ರಾಚೀನ ಪುಸ್ತಕಾಲಯದಲ್ಲಿ ಲಭಿಸಿತೆಂದು ತಿಳಿದು ಬಂದಿದೆ. ಇದೇ ಕವಿಯು ತೆಲುಗು ಭಾಷೆಯಲ್ಲಿ 'ಬಸವೋದಾಹರಣಮು' (ತೆಲುಂಗು) ಎಂಬ ಗ್ರಂಥವನ್ನು ಬರೆದಿರುವನು. ಶ್ರೀ ಸಿದ್ಧರಾಮೋದಾಹರಣಮ್ (ಸಂಸ್ಕೃತ) ಎಂಬ ಇನ್ನೊಂದು ಗ್ರಂಥ ಕೂಡ ಉಂಟೆಂದು ತಿಳಿದು ಬಂದಿದೆ. ಕನ್ನಡ ಬಸವೋದಾಹರಣ ಗ್ರಂಥ ಕೂಡ ಇರಬಹುದೆಂದು ತೋರುತ್ತದೆ.

ಈ ಕವಿಯು ಆರಾಧ್ಯ ಚರಿತ್ರಮು, ಬಸವ ಪುರಾಣಮು, ಅನ್ಯವಾದ ಕೋಲಾಹಲಂ, ಬಸವಣ್ಣನ ಪಂಚಗದ್ಯಂ, ಸದ್ಗುರು ರಗಳೆ, ಚೆನ್ನ ಬಸವ ರಗಳೆ, ಶರಣ: ಬಸನ ರಗಳೆ, ಬಸವರಾಜೀಯಮು, (ಸೋಮನಾಥ ಭಾಷ್ಯಂ) ಗಣಸಹಸ್ರ ನಾಮಾವಳಿ, ಶೀಲ ಸಂಪಾದನೆ, ಚತುರ್ವೇದ ಸಾರ ಸಂಗ್ರಹಂ, ಗಂಗೋದಯ ಕಾವ್ಯಂ, ವೃಷಾಧಿಪ ಶತಕಮು, ಚೆನ್ನಮಲ್ಲ ಸೀಸ ಪದ್ಯಮುಲು, ಪಂಚರತ್ನಂ, ಅನುಭವಸಾರಮು, ರುದ್ರಭಾಷ್ಯಂ, ನಮಸ್ಕಾರ ಗದ್ಯಂ, ವೀರಶೈವಾಚಾರ ಶಿಖಾಮಣಿ ಮೊದಲಾದ ಗ್ರಂಥಗಳನ್ನು ರಚಿಸಿದ್ದಾನೆ, ಈ ಮಹಾನುಭಾವನು ಸಂಸ್ಕೃತ, ತೆಲುಗು, ಕನ್ನಡ ಭಾಷೆಗಳಲ್ಲಿ

ಉದ್ದಾಮ ಕವಿಯಾಗಿದ್ದನಲ್ಲದೆ, ತಮಿಳು ಮತ್ತು ಮರಾಠಿ ಭಾಷೆಗಳಲ್ಲಿಯೂ ಕವಿತ್ವವನ್ನು ಮಾಡುವ ಸಾಮರ್ಥ್ಯವನ್ನು ಪಡೆದಿದ್ದನು.

ಮಹಾಕವಿಯೂ ಆದ ಇವನು ವೇಮನಾರಾಧ್ಯನ ಶಿಷ್ಯಸಂತತಿಗೆ ಸೇರಿದವನೆಂದು ತಿಳಿದುಬರುತ್ತದೆ. ಮಹಾನುಭಾವನಾದ ಈ ಕವಿ ಜಗದೇಕಮಲ್ಲನಿಂದ ಲಿಂಗಮುದ್ರೆಯ ಭೂಮಿಯನ್ನು ಪಡೆದನು. ೬೪ ಶೀಲಗಳನ್ನು ನಡೆಸಿದನು. ಚಕ್ರಪಾಣಿ ರಂಗನಾಥ ಮೊದಲಾದವರನ್ನು ವಾದದಲ್ಲಿ ಗೆದ್ದನು. ಬೆಂಗಳೂರು ಜಿಲ್ಲಾ ಕಳ್ಳಿಯದ ಮಠದಲ್ಲಿ (ತಾರಕಾಚಲ) ಸಮಾಧಿಯಾದನು. (ಈಗಲೂ ಕಳ್ಳಿಯದ ಬೆಟ್ಟದಲ್ಲಿರುವ ಈ ಕವಿಯ ಸಮಾಧಿಯು ಸುಕ್ಷೇತ್ರವೆನಿಸಿದೆ. ಆಗಾಗ್ಗೆ ಇಲ್ಲಿ ಶಿವಭಕ್ತರು ಪರ್ವವನ್ನು ನಡೆಸುವುದುಂಟು.) ತತ್ವವಿದ್ಯಾಕಲಾಪ, ಕವಿತಾಸಾರ, ಅನ್ಯದೈವ ಕೋಲಾಹಲ, ಭೃಂಗೀಶಾವತಾರ ಎಂಬ ಬಿರುದುಗಳನ್ನು ಪಡೆದಿದ್ದನು. ಇತ್ಯಾದಿ ವಿಷಯಗಳು ಪ್ರಾಚೀನ ವೀರಶೈವ ಗ್ರಂಥಗಳಲ್ಲಿ ನಿರೂಪಿತವಾಗಿವೆ. ಈತನು ಕ್ರಿ.ಶ. ೧೧೯೫ ರಲ್ಲಿದ್ದಿರಬಹುದೆಂದು ಕನ್ನಡಕವಿಚರಿತ್ರೆಕಾರರು ಹೇಳುತ್ತಾರೆ.

ಈತನ ಸ್ಥಳ ಮತ್ತು ಕಾಲಗಳ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಈತನು ಆಂಧ್ರದೇಶದ ಗೋದಾವರಿ ಜಿಲ್ಲಾ ಪಾಲ್ಕುರಿಕಿಯವನೆಂದು ಕನ್ನಡ ಕವಿ ಚರಿತ್ರೆಕಾರರೂ, ಇವನು ತುಮಕೂರುಜಿಲ್ಲಾ ಹಾಲ್ಕುರಿಕಿಯವನೆಂದು ಡಾ|| ಚಿಲಕೂರಿ ನಾರಾಯಣರಾಯರೂ ಹೇಳುತ್ತಾರೆ. ಆಂಧ್ರ ಕವಿ ಚರಿತೆಕಾರರು ಇವನ ಕಾಲ ಕ್ರಿ. ಶ. ೧೨೨೫ ಎಂದು ಅಭಿಪ್ರಾಯಪಟ್ಟಿದ್ದಾರೆ. ಇವನು ಭೃಂಗಿಗೋತ್ರದ ಗುರುಲಿಂಗದೇವನ ಪುತ್ರನೆಂದು ತಿಳಿದು ಬರುತ್ತದೆ. ಶ್ರೀ ಬಸವೇಶ್ವರನ ಬಗ್ಗೆ ಪಾಲ್ಕುರಿಕೆ ಸೋಮನಾಥನು ಅತೀವ ಭಕ್ತಿಯನ್ನು ವಹಿಸಿದ್ದನೆಂದು ಅವನ ಗ್ರಂಥಗಳ ಹೆಸರಿನಿಂದಲೇ ಸ್ಪಷ್ಟವಾಗುತ್ತದೆ. ಇವನ ಆಂಧ್ರ ಬಸವಪುರಾಣವನ್ನೇ ಭೀಮಕವಿಯು (ಕ್ರಿ. ಶ. ೧೩೬೯) ಕನ್ನಡಕ್ಕೆ ಭಾಷಾಂತರಿಸಿದ್ದಾನೆ. ಪ್ರಸಿದ್ಧ ಕನ್ನಡ–ಸಂಸ್ಕೃತ ಕವಿಯಾದ ಮರಿತೋಂಟದಾರ್ಯನು (ಕ್ರಿ. ಶ. ೧೫೬೦) 'ಪಾಲ್ಕುರಿಕೆ ಸೋಮನಾಥ ಪುರಾಣಂ' ಎಂಬ ಒಂದು ಕಾವ್ಯವನ್ನು ಕನ್ನಡದಲ್ಲಿ ಷಟ್ಪದಿಯ ಛಂದಸ್ಸಿನಲ್ಲಿ ಬರೆದು ಲೋಕೋಪಕಾರ ಮಾಡಿದ್ದಾನೆ. ಕೆಲವು ವೀರಶೈವ ಗ್ರಂಥ

ಕಾರರು ಇವನನ್ನು 'ವೀರಶೈವ ಮತಸ್ಥಾಪನಾಚಾರ್ಯ' ಎಂದು ಕೂಡ ಗೌರವಿಸಿದ್ದಾರೆ. ಇದು ಇವನ ಹಿರಿಮೆಗೆ ಉತ್ತಮ ನಿದರ್ಶನವಾಗಿದೆ.

ವೀರಶೈವ ಮತೋದ್ಧಾರ ಕಾರ್ಯದಲ್ಲಿ ಶ್ರೀ ರೇವಣಸಿದ್ಧ, ಶ್ರೀ ಬಸವೇಶ್ವರ, ಶ್ರೀ ಕೆರೆಯ ಪದ್ಮರಸ, ಶ್ರೀ ತೋಂಟದ ಸಿದ್ಧಲಿಂಗೇಶ್ವರ, ಲಕ್ಕಣ್ಣ ದಂಡೇಶ, ಜಕ್ಕಣಾಚಾರ್ಯ ಮೊದಲಾದ ಮಹಾತ್ಮರಿಗೆ ಇರುವ ಸ್ಥಾನವೇ ಪಾಲ್ಕುರಿಕೆ ಸೋಮನಾಥನಿಗೂ ಉಂಟು. ಆಂಧ್ರದೇಶದಲ್ಲಿ ವೀರಶೈವ ಧರ್ಮಪ್ರಚಾರ ಮಾಡಿದ ಕೀರ್ತಿ ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತ, ಮತ್ತು ಪಾಲ್ಕುರಿಕೆ ಸೋಮನಾಥ ಎಂಬ ಈ ಮೂರುಮಂದಿ ಮಹಾ ವಿಭೂತಿಗಳಿಗೆ ವಿಶೇಷತಃ ಸಲ್ಲತಕ್ಕುದಾಗಿದೆ. ಈ ಮಹಾಕವಿಯ ವಿಷಯವನ್ನು ವಿಶೇಷವಾಗಿ ತಿಳಿಯಲಾಶಿಸುವವರು ಶ್ರೀ ಬಂಡಾರು ತಮ್ಮಯ್ಯನವರಿಂದ ತೆಲುಗಿನಲ್ಲಿ ವಿರಚಿತವಾಗಿರುವ'ಪಾಲಕುರಕಿಸೋಮನಾಥ ಕವಿ'ಎಂಬ ಗ್ರಂಥ ಓದಬಹುದು.

ಪ್ರಕೃತ ಗ್ರಂಥವು ವಿವಿಧ ಛಂದಸ್ಸಿನಲ್ಲಿ ಸುಂದರವಾದ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಸಪ್ತ ವಿಭಕ್ತಿಗಳಿಂದಲೂ ಕೂಡಿದ ಕವಿತೆಗಳಿವೆ. ಕವಿತೆಯು ಶಬ್ದಾಲಂಕಾರ ಅರ್ಥಾಲಂಕಾರಗಳಿಂದಲೂ, ಭಕ್ತಿರಸ ಪೂರ್ಣತೆಯಿಂದಲೂ ಕೂಡಿ ನಾರಿಕೇಳ ಪಾಕದ ಶೈಲಿಯಿಂದ ಕಂಗೊಳಿಸುತ್ತಿದೆ. ಪಾರಾಯಣಪ್ರಿಯರಿಗೂ ಮುಮುಕ್ಷುಗಳಿಗೂ, ವಿದ್ವಾಂಸರಿಗೂ ಇದು ತುಂಬಾ ಪ್ರಿಯವಾಗಬಹುದು. ಇದು ಸಾಹಿತ್ಯ ಪ್ರಿಯರೂ, ಸಮಾಜಪ್ರೇಮಿಗಳೂ ಆದ ಜನರಿಗೆ ತುಂಬಾ ಉಪಯುಕ್ತವಾಗುವುದೆಂದು ನಾವು ನಂಬುತ್ತೇವೆ.

ಈ ಗ್ರಂಥದಲ್ಲಿ ಸಂಸ್ತುತ್ಯಮಾನನಾದ ಮಹಾತ್ಮನು ವೀರಶೈವ ಮತೋದ್ಧಾರಕನಾದ ಕಲ್ಯಾಣದ ಬಸವೇಶ್ವರನೆಂಬುದು ಸ್ಪಷ್ಟವಾಗಿಯೇ ಇದೆ. ಶ್ರೀ ಪಂಡಿತಾರಾಧ್ಯರುಕೂಡ ಬಸವನ ಭಕ್ತರಾಗಿದ್ದರೆಂಬ ವಿಷಯ ಗ್ರಂಥದ ೨೪ನೇ ಪದ್ಯದಲ್ಲಿ ಉಕ್ತವಾಗಿದೆ. ಈ ಗ್ರಂಥವು ಪಾರಾಯಣಕ್ಕೆ ಅರ್ಹವಾಗಿದೆ. ಇದೇ ಕವಿಯ ವೃಷಾಧಿಪ ಶತಕಮು, ಅಕ್ಷರಾಂಕನ ಪದ್ಯ, ಚೆನ್ನಮಲ್ಲ ಸೀಸ ಪದ್ಯಮುಲು ಎಂಬ ಗ್ರಂಥಗಳು ಕ್ಷಿಪ್ರದಲ್ಲಿಯೇ ಕವಿಯ ವಿಸ್ತಾರವಾದ ಚರಿತ್ರೆಯೊಂದಿಗೆ ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ಪ್ರಕಟವಾಗುತ್ತವೆ.

—ಸಂಪಾದಕ.

ಅನುಬಂಧ-೨

# ಬಸವೇಶ್ವರ ಚರಿತ್ರೆ

ಶ್ರೀ ಬಸವೇಶ್ವರನು ಭರತಖಂಡದ ಮಹಾವಿಭೂತಿಗಳ ಪಂಗ್ತಿಯಲ್ಲಿ ವಿರಾಜಮಾನನಾಗಿದ್ದಾನೆ. ಈತನನ್ನು ಕುರಿತು ಪಾಲುಕುರಿಕಿ ಸೋಮನಾಥ, ಹಂಪೆಯ ಹರೀಶ್ವರ, ಕಂಚಿಯ ಶಂಕರಾರಾಧ್ಯ, ಕವಿವ್ಯಾಸ, ಭೀಮಕವಿ, ಯಳಂದೂರು ಷಡಕ್ಷರದೇವ, ಸಿಂಗಿರಾಜ, ಬಸವಲಿಂಗಕವಿ ಮೊದಲಾದವರು ತೆಲಗು, ಕನ್ನಡ, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಉತ್ತಮವಾದ ಪುರಾಣ ಗಳನ್ನೂ ಮಹಾಕಾವ್ಯಗಳನ್ನೂ ಬರೆದಿದ್ದಾರೆ. ಬಸವನ ಸಮಕಾಲೀನರಾದ ಅಲ್ಲಮಪ್ರಭು, ಸಿದ್ಧರಾಮೇಶ್ವರ,ಚೆನ್ನಬಸವಣ್ಣ, ಮಾಚಿದೇವ, ಅಕ್ಕಮಹಾ ದೇವಿ ಮೊದಲಾದ ಶರಣರು ಬಸವಣ್ಣನವರನ್ನು ಕುರಿತು ಭಕ್ತಿಭಂಡಾರಿ, ಭಕ್ತಿ ಯುಗದ ಆಚಾರ್ಯ, ದ್ವಿತೀಯ ಪರಮೇಶ್ವರ, ವೃಷಭಾವತಾರ ಎಂದು ಮೊದ ಲಾಗಿ ಹಾಡಿದ್ದಾರೆ. ಮಹಾಕವಿ ಚಾಮರಸನು ಬಸವೇಶ್ವರನು ೧೨ನೆಯ ಶತ ಮಾನದಲ್ಲಿ 'ಭಕ್ತಿಯುಗ'ವನ್ನು ಸ್ಥಾಪಿಸಿದನೆಂದೂ, ಆ ಭಕ್ತಿಯುಗಕ್ಕೆ ಬಸ ವಣ್ಣನೇ ಆಚಾರ್ಯ ಪುರುಷನೆಂದೂ ಹೇಳಿರುತ್ತಾನೆ. ಈರೀತಿಯಾಗಿ ನೂರಾ ರುಮಂದಿ ಶಿವಶರಣರ ಮತ್ತು ಮಹಾಕವಿಗಳ ಭಕ್ತಿಗೆ ಕಾರಣನಾದ, ಎಂಟು ನೂರು ವರ್ಷಗಳಿಂದ ಇಡೀ ಭಾರತದಲ್ಲಿಯೇ ಅವತಾರಪುರುಷನೆಂದು ಪರಿಗಣಿ ತನಾದ ಮಹಾವ್ಯಕ್ತಿಯು ನಿಜವಾಗಿಯೂ ದೊಡ್ಡವನಾಗಿರಲೇಬೇಕು; ಕಾರ ಣಪುರುಷನೂ, ಪವಾಡಪುರುಷನೂ ಇದ್ದಿರಬೇಕು ಎನ್ನುವ ವಿಚಾರ ಸಾಮಾನ್ಯ ಜನರ ತಲೆಯಲ್ಲಿ ಕೂಡ ಹೊಳೆಯುವಂತಿದೆ. ಭರತಖಂಡದಲ್ಲಿ ಜನಿಸಿದ, ಅದರ ಲ್ಲಿಯೂ ಕನ್ನಡ ನಾಡಿನಲ್ಲಿ ಹುಟ್ಟಿ ಬಳೆದ ಪ್ರತಿಯೊಂದು ವ್ಯಕ್ತಿಯೂ ಬಸವೇಶ್ವ ರನ ವಿಚಾರವನ್ನು ತಿಳಿದುಕೊಳ್ಳುವುದು ಅತ್ಯವಶ್ಯವಾಗಿದೆ.ಬಸವಣ್ಣನವರ ಉಪ ದೇಶಗಳನ್ನು ಓದಿ, ಕೇಳಿ, ಆಚರಿಸುವುದು ಜನತೆಗೆ ಹೆಚ್ಚು ಲಾಭಪ್ರದವಾಗಿದೆ.

ಬಸವಣ್ಣನವರ ಚರಿತ್ರೆಯನ್ನು ತಿಳಿಯಲು ಈಗ ನಮಗೆ ಹಲಕೆಲವು ಸಾಧನಗಳಿವೆ. ಅರ್ಜುನವಾಡದ ಶಿಲಾಶಾಸನವು ಪ್ರಕಟವಾಗಿ ಈ ಬಗ್ಗೆ

ಒಳ್ಳೆಯ ಬೆಳಕನ್ನು ಬೀರಿವೆ. ವಚನವಾಙ್ಮಯದಿಂದ ಹಲವು ವಿಚಾರಗಳು ಲಭಿಸುಸುತ್ತವೆ. ಬಾಗೆವಾಡಿ, ಕೂಡಲ ಸಂಗಮ ಮತ್ತು ಕಲ್ಯಾಣ ಪಟ್ಟಣ ಈ ಕ್ಷೇತ್ರಗಳ ಅವಲೋಕನದಿಂದ ಕೆಲವು ವಿಚಾರಗಳು ನಮ್ಮ ಸ್ಫೂರ್ತಿಗೆ ಬರುತ್ತವೆ. ಬಸವಪುರಾಣಗಳಿಂದ ಅನೇಕ ವಿಷಯಗಳು ದೊರೆತಿವೆ. ಈಗಾಗಲೇ ಹಲವು ಮಂದಿ ಚಿಕ್ಕ ದೊಡ್ಡ ವಿದ್ವಾಂಸರು ಬಸವಣ್ಣನವರನ್ನು ಕುರಿತು ಲೇಖನಗಳನ್ನೂ, ಗ್ರಂಥಗಳನ್ನೂ ಬರೆದಿದ್ದಾರೆ. ಇಷ್ಟೆಲ್ಲ ಆದರೂ ಸುಸ್ಪಷ್ಟವಾದ ಬಸವಣ್ಣನವರ ಚರಿತ್ರೆಯು ಇನ್ನೂ ಬೆಳಕಿಗೆ ಬಂದಿಲ್ಲ. ಅರ್ಜುನವಾಡದ ಶಿಲಾಶಾಸನವೂ ಬಸವಪುರಾಣಗಳೂ ಪರಸ್ಪರ ದೂರವಾದ ಸುದ್ದಿಗಳನ್ನು ಸಾರುತ್ತಿವೆ. ವಚನವಾಙ್ಮಯವು ಸಂಪೂರ್ಣವಾಗಿ ಪರಿಷ್ಕೃತವಾಗಿ ಪ್ರಕಟವಾಗಿಲ್ಲ. ಬಸವಣ್ಣನವರು ಬರೆದ ಹಲವು ಗ್ರಂಥಗಳೂ ಬೆಳಕಿಗೆ ಬಂದಿಲ್ಲ. ಇಂಗಳೇಶ್ವರ, ಬಾಗೆವಾಡಿ, ಕೂಡಲಸಂಗಮ ಮತ್ತು ಕಲ್ಯಾಣ ಪಟ್ಟಣಗಳಂತಹ—ಬಸವಣ್ಣನವರ ಚರಿತ್ರೆಗೆ ನಿಕಟ ಸಂಬಂಧವುಳ್ಳ—ಐತಿಹಾಸಿಕ ಸ್ಥಳಗಳಲ್ಲಿರುವ ಶಿಲಾಶಾಸನಗಳು ಇನ್ನೂ ಪ್ರಕಟವಾಗಿಲ್ಲ. ಹಲವು ಪ್ರಾಮುಖ್ಯವಾದ ವೀರಶೈವ ಗ್ರಂಥಗಳು ತಾಳೆಯೋಲೆಯ ಸೆರೆಮನೆಯಿಂದ ಇನ್ನೂ ಹೊರಗೆ ಬಂದಿಲ್ಲ. ಬಸವಣ್ಣನವರ ಅನುಯಾಯಿಗಳಾದ ವೀರಶೈವರೂ ಅವರ ನಾಡಿನವರೇ ಆದ ಕನ್ನಡಿಗರೂ ಈ ಸಂಶೋಧನ ಕಾರ್ಯದಲ್ಲಿ ಅಷ್ಟಾಗಿ ಮುಂದುವರಿದಿಲ್ಲ. ಈ ಎಲ್ಲ ಕಾರಣಗಳಿಂದ ಶ್ರೀ ಬಸವೇಶ್ವರನ ಚರಿತ್ರೆಯನ್ನು ಸರ್ವಾಂಗೀನ ಸುಂದರವಾಗಿ ಹೇಳುವಷ್ಟು ಸೌಕರ್ಯಗಳು ಈಗ ನಮಗೆ ಇಲ್ಲವಾಗಿವೆ. ದೊರೆತಷ್ಟು ಸಾಧನಗಳಿಂದ ಆ ಮಹಾತ್ಮನ ಚರಿತ್ರೆಯನ್ನು ಇಲ್ಲಿ ಸಂಗ್ರಹವಾಗಿ ನಿರೂಪಿಸಲಾಗಿದೆ.

## ಬಸವನ ಬಾಲ್ಯ

ಶ್ರೀ ಬಸವೇಶ್ವರನು ಬಿಜಾಪುರ ಜಿಲ್ಲಾ ಇಂಗಳೇಶ್ವರ ಬಾಗೆವಾಡಿ ಪಟ್ಟಣದಲ್ಲಿ ಶಿವಭಕ್ತರಾದ ಮಾದಿರಾಜ ಮತ್ತು ಮಾದಲಾಂಬಿಕೆ ಎಂಬ ಪುಣ್ಯದಂಪತಿಗಳ ಗರ್ಭದಲ್ಲಿ ಕ್ರಿ.ಶ. ೧೧೩೧ನೇ ಸಂವತ್ಸರದಲ್ಲಿ ಜನ್ಮಿಸಿದನು. ಶಿವಭಕ್ತಿಸಂಪನ್ನರಾದ ಆ ಮಾದಿರಾಜ ಮಾದಲಾಂಬಿಕೆಯರು ಬಹುಕಾಲ ತನುಗೆ ಮಕ್ಕ

ಇಲ್ಲದುದರಿಂದ ಬಾಗೇವಾಡಿಯಲ್ಲಿರುವ-ಶಿವದೇವಾಲಯದಲ್ಲಿ (ಈಗ ಅದನ್ನು ಬಸವೇಶ್ವರ ದೇವಾಲಯ ಎಂದು ಕರೆಯುತ್ತಿದ್ದಾರೆ.) ಪುತ್ರಕಾಂಕ್ಷಿತರಾಗಿ ಶ್ರೀ ನಂದೀಶ್ವರ ವ್ರತವನ್ನು ಮೂರುವರ್ಷಗಳ ಕಾಲ ಭಕ್ತಿಯಿಂದ ಆಚರಿಸಿದರು. ಅದರ ಫಲವಾಗಿ ಶಿವಾನುಗ್ರಹದಿಂದ ಆ ಪುಣ್ಯದಂಪತಿಗಳ ಗರ್ಭದಲ್ಲಿ ಯುಗಪುರುಷರಾದ ಬಸವಣ್ಣನವರು ಶುಭಯೋಗ ಶುಭದಿನದಲ್ಲಿ ಹುಟ್ಟಿದರು. ಆದಿನವೇ ಬಾಗೇವಾಡಿಗೆ ಅನತಿದೂರದಲ್ಲಿರುವ ಕೂಡಲ ಸಂಗಮದ ಕ್ಷೇತ್ರದಲ್ಲಿದ್ದ ಜಾತವೇದಸ್ವಾಮಿ(ಈತನಿಗೆ 'ಈಶಾನ್ಯಗುರು'ಎಂದೂ ಹೆಸರಿದ್ದಂತೆ ಹರಿಹರಕವಿ ಹೇಳುತ್ತಾನೆ.) ಎಂಬ ಶಿವಯೋಗಿಯು ದಿವ್ಯಜ್ಞಾನದಿಂದ ಬಸವನ ಅವತಾರವನ್ನು ತಿಳಿದವನಾಗಿ ಬಾಗೇವಾಡಿಯ ಮಾದಿರಾಜನ ಮನೆಗೆ ಬಂದು, ಬಸವನ ಭವಿಷ್ಯವನ್ನು ಕುರಿತು ಅವನ ಮಾತಾಪಿತೃಗಳಿಗೆ ತಿಳಿಸಿ ಆ ಶಿಶುವಿಗೆ ವಿಧ್ಯುಕ್ತವಾಗಿ ಇಷ್ಟಲಿಂಗ ಧಾರಣ ಮಾಡಿದರು.

ಬಸವಣ್ಣನವರು ಸುಮಾರು ೧೬ ವರ್ಷಗಳವರೆಗೆ ಬಾಗೇವಾಡಿಯಲ್ಲಿ ಇದ್ದು ತಮ್ಮ ಬಾಲ್ಯದ ವಿದ್ಯಾಭ್ಯಾಸವನ್ನು ಮುಗಿಸಿದರು. ಮುಂದೆ ಅವರು ತಾವು ಹುಟ್ಟಿದ ಬ್ರಾಹ್ಮಣ ಮತವನ್ನು ಆವಕಾರಣದಿಂದಲೋ ತ್ಯಜಿಸಿ 'ಕರ್ಮಲತೆಯಂತಿರ್ದ ಜನ್ಮಿವಾರಮಂ ಕಳಲ್ಚಿ' ಕೂಡಲ ಸಂಗಮಕ್ಕೆ ತನ್ನ ಸೋದರಿಯಾದ ಅಕ್ಕನಾಗಮ್ಮನ ಸಹಿತವಾಗಿ ಹೋಗಿ ಶ್ರೀ ಜಾತವೇದಸ್ವಾಮಿಯಿಂದ ಸಕಲಶಾಸ್ತ್ರಗಳನ್ನೂ ತಿಳಿದು ಅಲ್ಲಿಯೇ ಹತ್ತೆಂಟು ವರ್ಷಗಳ ಕಾಲ ಇದ್ದು, ತಮ್ಮ ಅವತಾರದ ಮಹತ್ಕಾರ್ಯ ಸಾಧನೆಗಳಿಗೆ ಬೇಕಾದ ಪೂರ್ವಸಿದ್ಧತೆಯನ್ನು ಆ ಮಹಾ ಕ್ಷೇತ್ರದ ಗುರುಕುಲದಲ್ಲಿ ಮಾಡಿಕೊಂಡರು.

ಆ ಕಾಲದಲ್ಲಿ ಕಲ್ಯಾಣದಲ್ಲಿ ಚಾಲುಕ್ಯ ವಂಶದ ತೈಲಪನನ್ನು, ಬಸವಣ್ಣನ ಸೋದರಮಾವನಾದ ಬಲದೇವನೇ ಮೊದಲಾದವರ ಸಹಾಯದಿಂದ ತರ್ದವಾಡಿ ನಾಡಿನ (ಬಸವಣ್ಣನವರು ಹುಟ್ಟಿದ ಬಾಗೇವಾಡಿ ಪ್ರಾಂತ) ಮಹಾ ಮಂಡಲಿಕನಾಗಿದ್ದ ಕಲುಚುರಿ ಬಿಜ್ಜಳನು ಜೈಸಿ ಕಲ್ಯಾಣದ ಸಿಂಹಾಸನವನ್ನು ಆಕ್ರಮಿಸಿ, ಸಿಂಹಾಸನಾಧಿಪತಿಯಾಗಿ ಕ್ರಿ. ಶ. ೧೧೫೬ ರಿಂದ ರಾಜ್ಯಭಾರವನ್ನು ಪ್ರಾರಂಭಿಸಿದನು. ಆ ಬಿಜ್ಜಳನ ಮುಖ್ಯ ಮಂತ್ರಿಯೂ,

ಸವನ ಸೋದರಮಾವನೂ ಆದ ಬಲದೇವನು ತನ್ನ ಮಗಳಾದ ಗಂಗಾಂಬಿಕೆಯನ್ನು ಬಸವನಿಗೆ ಕೊಟ್ಟು ಲಗ್ನಮಾಡುವ ನಿಮಿತ್ತದಿಂದ ಶ್ರೀ ಜಾತವೇದ ಸ್ವಾಮಿಗಳ ಅಪ್ಪಣೆಯನ್ನು ಪಡೆದು ಬಸವನನ್ನು ಕೂಡಲ ಕ್ಷೇತ್ರದಿಂದ ಸುಮಾರು ನೂರುಮೈಲಿ ದೂರವಿರುವ ಕಲ್ಯಾಣ ಪಟ್ಟಣಕ್ಕೆ ಕರೆಸಿಕೊಂಡು ಆ ಮಹಾರಾಜಧಾನಿಯಲ್ಲಿ–ಬಸವೇಶ್ವರ–ಗಂಗಾಂಬಿಕೆಯರ ವಿವಾಹವನ್ನು ವಿಧ್ಯುಕ್ತವಾಗಿಯೂ, ವೈಭವವಾಗಿಯೂ ನಡೆಯಿಸಿದನು. ಅನಂತರ ಬಸವಣ್ಣನವರು ರಾಜಾಸ್ಥಾನದಲ್ಲಿ ಕರಣಿಕರ ಕೆಲಸವನ್ನು ಕೈಗೊಂಡು ಇರುತ್ತಿದ್ದರು. ಈ ಕಾಲದಲ್ಲಿ ಇವರ ಪಾಂಡಿತ್ಯ ಪ್ರತಿಭೆಗಳು ಎಲ್ಲೆಲ್ಲೂ ಪಸರಿಸಿದುವು.

ಇದೇ ಸಂದರ್ಭದಲ್ಲಿ ಕಲ್ಯಾಣದ ಮಂತ್ರಿಯಾಗಿದ್ದ ಸಿದ್ದಣ್ಣ ಸಚಿವನ ಮಗಳು ನೀಲಾಂಬಿಕೆಯನ್ನು ಕೂಡ ಬಸವಣ್ಣನವರು ವಿವಾಹವಾದಂತೆ ತೋರುತ್ತದೆ. ಹರಿಹರನ ಬಸವರಾಜದೇವರ ರಗಳೆಯಲ್ಲಿ ಗಂಗಾದೇವಿ, ಮಾಯಾದೇವಿ, ಎಂಬ ಇಬ್ಬರು ಪತ್ನಿಯರು ಬಸವಣ್ಣನವರಿಗಿದ್ದಂತೆ ತಿಳಿದು ಬಂದಿದೆ. ಕವಿಯು ಹೇಳುವ ಮಾಯಾದೇವಿಯು ಈ ನೀಲಾಂಬಿಕೆಯೇ ಆಗಿರಬೇಕು. ಕಾಲಜ್ಞಾನ ವಚನದಲ್ಲಿ ನೀಲಾಂಬಿಕೆಯು ಪ್ರಖ್ಯಾತಳಾಗಿದ್ದಾಳೆ. ಕೂಡಲ ಸಂಗಮದ ಪಕ್ಕದಲ್ಲಿ ಈಗಲೂ ನೀಲಾಂಬಿಕೆ, ಗಂಗಾಂಬಿಕೆಯರ ಸಮಾಧಿಗಳಿವೆ. ಈ ನೀಲಾಂಬಿಕೆಯು ಸಿದ್ದಣ್ಣಮಂತ್ರಿಯ ಮಗಳೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಒಟ್ಟಿನಲ್ಲಿ ಬಸವಣ್ಣನವರಿಗೆ ಗಂಗಾಂಬಿಕೆ–ನೀಲಾಂಬಿಕೆಯರೆಂಬ ಉಭಯ ಪತ್ನಿಯರಿದ್ದಂತೆ ಗ್ರಂಥಾಂತರಗಳಿಂದ ತಿಳಿದುಬಂದಿದೆ.

## ಮಂತ್ರಿತ್ವ ಸ್ವೀಕಾರ

ಕಲ್ಯಾಣದಲ್ಲಿ ಬಲದೇವ–ಸಿದ್ದಣ್ಣಗಳ ಅಳಿಯನೆಂಬ ಕಾರಣದಿಂದಲೂ, ಕೂಡಲ ಸಂಗಮನ ಅನುಗ್ರಹವನ್ನು ಪಡೆದವನೆಂಬ ನಿಮಿತ್ತದಿಂದಲೂ, ಸರ್ವಲಕ್ಷಣ ಸಂಪನ್ನನೂ ಸರ್ವಾಂಗಸುಂದರನೂ, ಸರ್ವವಿದ್ಯಾವಿಶಾರದನೂ ಆದುದರಿಂದಲೂ ಬಸವಣ್ಣನ ಕೀರ್ತಿಯು ಹುಣ್ಣಿಮೆಯ ಚಂದ್ರಕಾಂತಿಯಂತೆ ಬೆಳೆಯ ಹತ್ತಿತು. ಸ್ವಲ್ಪಕಾಲದಲ್ಲಿಯೇ ಬಲದೇವ ಮಂತ್ರಿಯು ಕರ್ಮಧರ್ಮ ಸಂಯೋಗದಿಂದ ಶಿವಲೋಕ ಯಾತ್ರೆಯನ್ನು ಮಾಡಿದನು. ಆಗ

ಕಲ್ಯಾಣದಲ್ಲಿಯೇ ಇದ್ದ ಬಾಚರಸರೇಮೊದಲಾದ ರಾಜಕಾರಣಿಗಳ ಪ್ರಯತ್ನದ ಫಲದಿಂದ ಕಾರಣಪುರುಷನಾದ ಶ್ರೀಬಸವೇಶ್ವರನು ಕಲ್ಯಾಣದ ಮಹಾಮಂತ್ರಿಯಾಗಿ ಅಧಿಕಾರವನ್ನು ಸ್ವೀಕರಿಸಬೇಕೆಂದು ಸಾರ್ವಭೌಮ ಬಿಜ್ಜಳನಿಂದ ಪ್ರಾರ್ಥಿಸಲ್ಪಟ್ಟನು. ಬಸವಣ್ಣನು ಬಿಜ್ಜಳನ ಸಾಮ್ರಾಜ್ಯದ ಮುಖ್ಯಮಂತ್ರಿ ಪದವಿಯನ್ನು ಸ್ವೀಕರಿಸಿದಾಗ ಅವನಿಗೆ ೨೬ವರ್ಷ ವಯಸ್ಸಾಗಿರಬಹುದೆಂದು ಚಾರಿತ್ರಕ ಸಂಶೋಧನೆಯಿಂದ ತಿಳಿದು ಬಂದಿದೆ.

## ಮಹತ್ಕಾರ್ಯಗಳು

ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳರಾಜನು ಸುಮಾರು ಕ್ರಿ.ಶ. ೧೧೫೬ರಿಂದ ೧೧೬೮ರ ವರೆಗೆ ಆಳಿದನೆಂದು ಇತಿಹಾಸಕಾರರು ನಿರ್ಣಯಿಸಿದ್ದಾರೆ. ಬಿಜ್ಜಳನ ಆಳಿಕೆಯ ಮೊದಮೊದಲು ಒಂದೆರಡು ವರ್ಷಗಳಕಾಲವಾದರೂ ಬಲದೇವನು ಮುಖ್ಯಮಂತ್ರಿಯಾಗಿದ್ದಿರಬೇಕು. ಕಲ್ಯಾಣದಲ್ಲಿ ಬಿಜ್ಜಳನ ಕೊಲೆಯಾದ (೧೧೬೮ರ) ಕೆಲವು ತಿಂಗಳ ಹಿಂದಾದರೂ ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ಹೋಗಿರಬೇಕು. ಅಂದರೆ ಬಿಜ್ಜಳನ ಆಳ್ವಿಕೆಯ ಸುಮಾರು ೧೨ ವರ್ಷಗಳಲ್ಲಿ ಆದ್ಯಂತದ ೨ ವರ್ಷಗಳನ್ನು ಕಳೆದರೆ ಮಧ್ಯದ ಹತ್ತುವರ್ಷಗಳಕಾಲ ಬಸವಣ್ಣನವರು ಮುಖ್ಯಮಂತ್ರಿಗಳಾಗಿದ್ದರೆಂದು ತರ್ಕಿಸಬೇಕಾಗುತ್ತದೆ. ಬಸವಣ್ಣನವರು ಶಿವಾನುಗ್ರಹದಿಂದ ತಮಗೆ ಪ್ರಾಪ್ತವಾದ ಪದವಿಯನ್ನೂ ತಮ್ಮ ಮಾವಂದಿರಾದ ಬಲದೇವ ಮತ್ತು ಸಿದ್ದಣ್ಣ ಮಂತ್ರಿಗಳಿಂದ ದೊರೆತ ಅಪಾರವಾದ ಐಶ್ವರ್ಯವನ್ನೂ ಲೋಕೋದ್ಧಾರಕ್ಕಾಗಿಯೂ, ಗುರುಲಿಂಗ ಜಂಗಮರ ಸೇವೆಗಾಗಿಯೂ, ವೀರಶೈವ ಧರ್ಮದ ಉದ್ಧಾರಕ್ಕಾಗಿಯೂ, ಹಿಂದೂಸಮಾಜದ ಸುಧಾರಣೆಗಾಗಿಯೂ, ಕನ್ನಡ ನಾಡುನುಡಿಗಳ ಏಳಿಗೆಗಾಗಿಯೂ ವಿನಿಯೋಗಿಸಿದರೆಂಬುದು ಇತಿಹಾಸದಲ್ಲಿ ಸುಸ್ಪಷ್ಟವಾಗಿದೆ. ಬಸವಣ್ಣನವರು ಮಾಡಿದ ಆ ಮಹಾತ್ಕಾರ್ಯಗಳು ಏನೆಂಬುದನ್ನು ಈ ಮುಂದೆ ಸಂಗ್ರಹವಾಗಿ ನಿರೂಪಿಸಲಾಗಿದೆ.

೧. ನಡೆನುಡಿಗಳು ಒಂದಾಗಿ ಅನುಭವವು ಮುಂದಾಗಿ ಜನರು ತಮ್ಮ ಜೀವಿತವನ್ನು ಸಫಲಮಾಡಿಕೊಳ್ಳುವ ಸಲುವಾಗಿ ಕಲ್ಯಾಣಪಟ್ಟಣದಲ್ಲಿ

ಅನುಭವ ಮಂಟಪ ಎಂಬ ಒಂದು ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿದುದು. ಆ ಮಹಾಸಂಸ್ಥೆಗೆ ನಿರಂಜನಮೂರ್ತಿಯಾದ ಅಲ್ಲಮಪ್ರಭುವನ್ನು ಅಧ್ಯಕ್ಷರನ್ನಾಗಿಯೂ, ಆದರ್ಶ ಜೀವನವುಳ್ಳ ಚೆನ್ನಬಸವಣ್ಣ, ಅಕ್ಕನಾಗಮ್ಮ, ಸಿದ್ಧರಾಮೇಶ್ವರ, ಮಡಿವಳಮಾಚಯ್ಯ, ಕಿನ್ನರಿ ಬ್ರಹ್ಮಯ್ಯ, ಸತ್ಯಕ್ಕ ಮೊದಲಾದವರನ್ನು ಸದಸ್ಯರನ್ನಾಗಿಯೂ ನಿಯೋಜಿಸಿ ತನ್ಮೂಲಕವಾಗಿ ಲೋಕದ ಉದ್ಧಾರಕ್ಕೆ ಸಾಧಕಗಳಾದ ಉದಾತ್ತ ತತ್ವಗಳನ್ನು ನಿರ್ಣಯಿಸಿ ಪ್ರಚಾರ ಮಾಡಿದುದು. ಅವು ಸಮಾಜದಲ್ಲಿ ಅನುಷ್ಠಾನಕ್ಕೆ ಬರುವಂತೆ ಮಾಡಿದುದು.

೨. ಜನರಲ್ಲಿ ಪ್ರಾಣಿ ಹಿಂಸೆ, ಮದ್ಯಪಾನ, ವ್ಯಭಿಚಾರ, ಕಳ್ಳತನ, ಸೋಮಾರಿತನ ಇತ್ಯಾದಿ ಕ್ಷುದ್ರಗುಣಗಳು ನಾಶವಾಗುವಂತೆ-ಸದಾಚಾರವೇ ಸ್ವರ್ಗವೆಂದು ಬೋಧಿಸಿ-ಜೀವನ ಪರಿಶುದ್ಧತೆಯು ಹೆಚ್ಚುವಂತೆ ಮಾಡಿದುದು. ಯಜ್ಞ-ಯಾಗಗಳ ನೆಪದಿಂದಲೂ ಪೂಜೆಪುರಸ್ಕಾರಗಳ ಕಾರಣದಿಂದಲೂ ಸಮಾಜದಲ್ಲಿ ನಡೆಯುತ್ತಿದ್ದ ಪ್ರಾಣಿಹಿಂಸೆಯನ್ನು ತಪ್ಪಿಸಿದುದು. ಜನರಲ್ಲಿ ಅಹಿಂಸಾಧರ್ಮವನ್ನು ಪ್ರಸಾರ ಮಾಡಿದುದು.

೩. ವರ್ಣಾಶ್ರಮಗಳ ಹೆಸರಿನಿಂದಲೂ, ಮತಪಂಥಗಳ ನೆಪದಿಂದಲೂ ಜನರಲ್ಲಿ ಬಳೆದಿದ್ದ ಊಚ ನೀಚ ಭಾವಗಳನ್ನು ಹೋಗಲಾಡಿಸಿ ಶಿವದೀಕ್ಷೆಯಿಂದ ಎಲ್ಲರನ್ನೂ ಸಂಸ್ಕರಿಸಿ ಭಕ್ತಿಯ ಬೆಳಕಿನಲ್ಲಿ ಲಿಂಗದ ನೆರವಿನಲ್ಲಿ ಎಲ್ಲ ಜೀವಿಗಳೂ ದೇವನಾಗುವ ಶಿವಭಕ್ತಿ ಮಾರ್ಗವನ್ನು ಬೋಧಿಸಿದುದು.

೪. ಸ್ತ್ರೀ ಪುರುಷರು ಸಮಾನರೆಂಬ ವಿಶ್ವಪ್ರೇಮದ ತತ್ವವನ್ನು ಬೋಧಿಸಿದುದು. ಆ ಕಾಲದಲ್ಲಿದ್ದ 'ಗಂಡುಸರು ಹೆಚ್ಚು, ಹೆಂಗುಸರು ಕಡಿಮೆ' ಎಂಬ ಸ್ಮೃತಿಕಾರರ ಭಾವನೆಯನ್ನು ಕತ್ತರಿಸಿದುದು. ಎಲ್ಲ ಸ್ತ್ರೀಯರಿಗೂ ಮೋಕ್ಷಾಧಿಕಾರವನ್ನು ಲಿಂಗಧಾರಣದ ಮೂಲಕ ಅನುಗ್ರಹಿಸಿದುದು.

೫. "ಕಾಯಕವೇ ಕೈಲಾಸ" ಎಂಬ ಘನವಾದ ತತ್ವವನ್ನು ಬೋಧಿಸಿ ಎಲ್ಲ ಜನರನ್ನೂ ಉದ್ಯೋಗಶೀಲರನ್ನಾಗಿ ಮಾಡಿದುದು. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಎಂದು ಹೇಳಿ, ಲೋಕದ ಬಾಳು ದುಃಖವಲ್ಲ ಎಂಬುದನ್ನು ತಿಳಿಸಿ ಎಚ್ಚರಿಸಿದುದು. ಎಲ್ಲ ಕೆಲಸ ಕಾರ್ಯಗಳನ್ನು ಮಾಡತ

ಕ್ಕವರೂ ಸಮಾನಗೌರವೀಯರೆಂಬ ರಾಷ್ಟ್ರೀಯ ತತ್ವಗಳನ್ನು ಪ್ರಕಟಿಸಿದುದು. ತನ್ಮೂಲಕವಾಗಿ ದೇಶದ ಸ್ವಾವಲಂಬನಕ್ಕೂ ಸಂಪದಭಿವೃದ್ಧಿಗೂ ಕಾರಣ ರಾದುದು.

೬. ಅದುವರೆಗೆ ವಿದ್ವಾಂಸರಿಂದ ಕಡೆಗಣಿಸಲ್ಪಟ್ಟಿದ್ದ ದೇಶಭಾಷೆ ಯಾದ ಕನ್ನಡವನ್ನು ಕಳೆಗೊಳಿಸಿದುದು. ಕನ್ನಡವಲ್ಲಿ ಎರಡೆಂಭತ್ತುಕೋಟಿ ವಚನಗಳಿಗೆ ಕಾರಣಕರ್ತರಾದುದು. ತಾನು ಹಲವು ಮಹತ್ವದ ಗ್ರಂಥಗ ಳನ್ನು ಕನ್ನಡದಲ್ಲಿ ಬರೆದು ಅನೇಕರಿಗೆ ಮಾರ್ಗದರ್ಶಕನಾದುದು. ಕನ್ನಡ ಕುಲದ ಅಭಿಮಾನವನ್ನು ಜನತೆಯಲ್ಲಿ ಹಬ್ಬಿಸಿದುದು.

೭. ಹಿಂದೂ ಜನಾಂಗದಲ್ಲಿ ಬೇರೂರಿದ್ದ ಅಸ್ಪೃಶ್ಯತೆಯೆಂಬ ಕಲಂ ಕವನ್ನು ಹೋಗಲಾಡಿಸಲು ಕಂಕಣ ಕಟ್ಟಿದುದು. 'ಕೂಡಲ ಸಂಗನ ಶರ ಣರು ಅಖಿಳ ಜೀವಾವಳಿಯ ಲೇಸನೇ ಬಯಸುವರು' ಎಂಬ ತತ್ವವನ್ನು ಸಾರಿದುದು. ಕಲ್ಯಾಣದಲ್ಲಿಯೇ ಇದ್ದ ಕಂಬಳಿಯ ನಾಗಯ್ಯ, ಡೋಹರ ಕಕ್ಕಯ್ಯ, ಶಿವಶರಣ ಹರಳಯ್ಯ ಮೊದಲಾದ ಪಂಚಮವರ್ಗದ ಜನತೆ ಯನ್ನು ಶಿವದೀಕ್ಷೆಯಿಂದ ಉದ್ಧರಿಸಿ ಶಿವಭಕ್ತರನ್ನಾಗಿ ಮಾಡಿ ಪೂಜ್ಯವಾದ ಅನುಭವ ಮಂಟಪದಲ್ಲಿ ಅವರಿಗೆ ಯೋಗ್ಯ ಸ್ಥಾನವನ್ನು ಸಲ್ಲಿಸಿದುದು- ಆ ತತ್ವಸಾಧನೆಗಾಗಿಯೇ ತನ್ನ ಜೀವನವನ್ನು ಸಮರ್ಪಿಸಿದುದು- 'ವರ್ಣಾನಾಂ ಕಿಂಪ್ರಯೋಜನಂ' ಎಂಬ ಶಿವಾಗಮದ ಸತ್ಯದ ಡಂಗೂರ ಸಾರಿದುದು.

೮. ದೇವರು ಒಬ್ಬನೆಂದು ಸಾರಿದುದು. ಇಬ್ಬರು ಮೂವರೆಂಬ ಭ್ರಾಂತಿಯನ್ನು ಹೊಡೆದೋಡಿಸಿದುದು. 'ಭಕ್ತಿಪ್ರಿಯ ನಮ್ಮ ಕೂಡಲ ಸಂಗ ಮದೇವ' ಎಂಬ ಸಿದ್ಧಾಂತವನ್ನು ಜಗತ್ತಿಗೆ ಎತ್ತಿ ತೋರಿಸಿದುಹು. ಕರ್ಮ ಮತ್ತು ಜ್ಞಾನ ಮಾರ್ಗಗಳಿಗಿಂತ ಭಕ್ತಿಮಾರ್ಗವು ಮುಕ್ತಿಗೆ ಸಮಿಾಪವಾದು ದೆಂಬುದನ್ನು ತಾವು ಆಚರಿಸಿ ತೋರಿದುದು. ತನ್ಮೂಲಕವಾಗಿ ಲೋಕೋ ದ್ಧಾರ ಮಾಡಿದುದು.

೯. ಲಿಂಗಧಾರಣವು ಸರ್ವೋತ್ಕೃಷ್ಟ ಧರ್ಮವೆಂದೂ ಮಾನವರ ಐಹಿಕಾಮುಷ್ಮಿಕ ಸಿದ್ಧಿಗೆ ಕಾರಣವೆಂದೂ ತನ್ನ ಆಚರಣೆಯಿಂದ ತೋರಿಸಿ

ದುದು- ತ್ರಿವಿಧ ದಾಸೋಹವೇ (ಗುರು, ಲಿಂಗ, ಜಂಗಮ ಸೇವೆ) ಜೀವನದ ಸರ್ವಸ್ವವೆಂದು ಸಾರಿದುದು. 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬುದೇ ಶಿವ ಭಕ್ತರ ಮುಖ್ಯಲಕ್ಷಣವೆಂದು ಒತ್ತಿ ಹೇಳಿದುದು-

೧೦. ಕ್ರಿಯಾ ಪ್ರಧಾನವಾದ ಅಷ್ಟಾವರಣ, ನೀತಿ ಪ್ರಧಾನವಾದ ಪಂಚಾಚಾರ, ಜ್ಞಾನ ಪ್ರಧಾನವಾದ ಷಟ್ಸ್ಥಲ, ಇವೆಲ್ಲಕ್ಕೂ ಮೂಲವಾದ ಲಿಂಗಧಾರಣ ಮತ್ತು ಶಿವದೀಕ್ಷಾ ಸಂಸ್ಕಾರ ಇವುಗಳಿಂದ ಕೂಡಿದ ವೀರಶೈವ ಧರ್ಮಸಮನ್ವಯ ಇವುಗಳನ್ನು ಅರಿದು ಆಚರಿಸಿ ತೋರಿದುದು ವೀರಶೈವ ನಿರ್ಣಯದ ಪರಮಾವತಾರನೆನಿಸಿದುದು.

ಈ ಮೇಲೆ ಹೇಳಿದ ತತ್ವಗಳಲ್ಲಿ ಬಸವಣ್ಣನವರ ಎಲ್ಲ ಬೋಧೆಯೂ ಅಡಕವಾಗಿದೆಯೆಂದೂ, ಈ ಬೋಧೆಗಳು ತ್ರಿಕಾಲಾಬಾಧಿತವಾಗಿವೆಯೆಂದೂ ವಿಶ್ವಧರ್ಮಕ್ಕೆ ಅರ್ಹವಾಗಿವೆಯೆಂದೂ ವಿವೇಕಿಗಳೆಲ್ಲರೂ ಹೇಳಬಹುದಾಗಿದೆ.

## ಕಲ್ಯಾಣದ ಕ್ರಾಂತಿ

ಶ್ರೀ ಬಸವೇಶ್ವರನು ಆಗಿನ ಕಾಲದ ಜನರಿಗೆ ಹೊಸದಾಗಿ ತೋರಿದ ಕ್ರಾಂತಿಕಾರಕವೆಂದು ಭಾಸವಾದ ಅಭಿಪ್ರಾಯಗಳನ್ನು ಹೇಳಿದುದರ ಫಲವಾಗಿಯೂ, ಅಂದಿನ ರಾಜಶಾಸನಕ್ಕೆ ವಿರೋಧವಾದ ಹರಳಯ್ಯ-ಮಧುವಯ್ಯಗಳ ಬಾಂಧವ್ಯರೂಪವಾದ ವರ್ಣಸಂಕರವನ್ನು ಮಾಡಿದನೆಂಬ ಕಾರಣದಿಂದಲೂ, ಪ್ರಭುವಾದ ಬಿಜ್ಜಳನಿಗೂ ಮಂತ್ರಿಯಾದ ಬಸವಣ್ಣನಿಗೂ ಭಿನ್ನಾಭಿಪ್ರಾಯಗಳು ಬಂದು, ಅದು ಕಡೆಗೆ (ಕ್ರಿ. ಶ. ೧೧೬೮ರಲ್ಲಿ) ರಾಜ್ಯಕ್ರಾಂತಿಯಲ್ಲಿ ಪರಿಣಮಿಸಿ ಹೋಯಿತು. ಬಿಜ್ಜಳನು, ಹರಳಯ್ಯ-ಮಧುವಯ್ಯಗಳೆಂಬ ಶರಣರನ್ನು ಆನೆಯ ಕಾಲಿಗೆ ಕಟ್ಟಿಸಿ ಎಳೆಸಿ ತುಳಿಸಿ ಅವರ ಕಣ್ಣುಗಳನ್ನು ಕೀಳಿಸಿದನು. ಅದರಿಂದ ಕೃದ್ಧರಾದ ಶಿವಶರಣರು ಮಡಿವಳ ಮಾಚಯ್ಯ, ಚೆನ್ನಬಸವೇಶ್ವರ ಮತ್ತು ರುದ್ರಮುನಿಸ್ವಾಮಿ ಎಂಬುವರ ನೇತೃತ್ವದಲ್ಲಿ ಬಿಜ್ಜಳನ ಮೇಲೆ ತಿರುಗಿಬಿದ್ದರು. ಶಿವಶರಣರಾದ ಜಗದೇವ, ಮಲ್ಲಣ್ಣ, ಬೊಮ್ಮಣ್ಣ ಎಂಬ ವೀರರ ಕೈಯಿಂದ ಬಿಜ್ಜಳನ ಕೊಲೆಯಾಯಿತು. ತತ್ಸಂಬಂಧವಾಗಿ ಕಲ್ಯಾಣದಲ್ಲಿ ಶರಣರಿಗೂ, ರಾಜನ ಸೈನ್ಯಕ್ಕೂ ದೊಡ್ಡ

ಯುದ್ಧವಾಯಿತು. ರಕ್ತದ ಕಾಲುವೆ ಹರಿಯಿತು. ನಂದನವನದಂತಿದ್ದ ಕಲ್ಯಾಣವು ರುದ್ರಭೂಮಿಯಂತೆ ಭಯಂಕರವೆನಿಸಿತು. ಈ ಕ್ರಾಂತಿಯ ಫಲವಾಗಿ ಕಲಚುರಿ ಸಾಮ್ರಾಜ್ಯವು ಸಡಿಲವಾಯಿತು. ಹೊಂಚು ಹಾಕುತ್ತಿದ್ದ ಹೊಯ್ಸಳರು ಸಮಯವನ್ನು ಸಾಧಿಸಿ ಕಾಲಚೂರ್ಯರನ್ನು ನುಂಗಿದರು. ಅನಂತರ ಉತ್ತರದಿಂದ ದಕ್ಷಿಣಕ್ಕೆ ದಾಳಿಯಿಟ್ಟ ತುರುಷ್ಕರು ಈ ಸಾಮ್ರಾಜ್ಯವನ್ನು ಕೈವಶ ಮಾಡಿಕೊಂಡರು. ಕಲ್ಯಾಣವು ಕಣ್ಣೀರು ಸುರಿಸುವಂತಾಯಿತು. ಕೆಲಕಾಲ ಕಟಿಗರ ಕೇರಿಯೂ ಆಯಿತು. ಈಗ ಅದರ ಉನ್ನತಿಗೆ ಪ್ರಯತ್ನಗಳಾಗುತ್ತಿವೆ. 'ಕಾಲಾಯ ತಸ್ಮೈ ನಮಃ'.

## ಕೆಲವು ಮುಖ್ಯ ವಿಚಾರಗಳು

೧. ಶ್ರೀ ಬಸವೇಶ್ವರನ ತಂದೆ ಮಾದಿರಾಜ, ಅವರ ತಂದೆ ಲಿಂಗಭಟ್ಟ, ಇವರು ಬಾಗೆವಾಡಿಯ ಗ್ರಾಮಣೀಮಣಿಗಳು, ಅಂದರೆ ಶಾನುಭೋಗರು ಅಥವಾ ಕುಲಕರ್ಣಿಗಳಾಗಿದ್ದರು. ಇವರು ಶೈವಬ್ರಾಹ್ಮಣರೆಂದೂ, ಕಮ್ಮೆ ಕುಲದವರೆಂದೂ, ಕಾಶ್ಯಪಗೋತ್ರದ ಸಾಂಖ್ಯಾಯನ ಪ್ರವರದವರೆಂದೂ ಗ್ರಂಥಗಳು ಹೇಳುತ್ತವೆ. ಬಸವಣ್ಣನವರು ಆರಾಧ್ಯ ಬ್ರಾಹ್ಮಣರಾಗಿ ಹುಟ್ಟಿದರೆಂಬುದಕ್ಕೆ ತಕ್ಕ ಆಧಾರಗಳಿಲ್ಲವೆಂದು ತೋರುತ್ತದೆ.

೨. ಬಸವೇಶ್ವರನಿಗೆ 'ಬಾಲಸಂಗಯ್ಯ' ಎಂಬ ಒಬ್ಬ ಮಗನಿದ್ದಂತೆ ತಿಳಿದು ಬಂದಿದೆ. 'ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು, ಪಕ್ವವಾದ ಫಲವಿದ್ದಂತೆ ಕಸುಗಾಯ ಕೊಯ್ದ ಶಿವನು' ಎಂದು ಬಸವಣ್ಣನು ಪ್ರಲಾಪಿಸಿದನು. ಎಂದು ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರವು ಹೇಳುತ್ತದೆ- ಅರ್ಜುನವಾಡದ/ ಶಿಲಾಶಾಸನವು ಈ ಮಾತನ್ನು ಸಮರ್ಥಿಸುತ್ತದೆ. ಈ ಶಾಸನವು ಕ್ರಿ. ಶ. ೧೨೬೦ರಲ್ಲಿ ಲಿಖಿತವಾಗಿದೆ. ಅಂದರೆ ಬಸವಣ್ಣನಿಗೆ ಒಂದು ನೂರು ವರ್ಷಗಳ ಅಂತರದಲ್ಲಿ ಇದು ಬರೆಯಲ್ಪಟ್ಟಿದೆ. ಬಸವಣ್ಣನ ಮೊಮ್ಮಗ ದೇವರಾಜ ಮುನಿಪ, ಅವನ ವಂಶೀಯ ಕಲಿದೇವ, ಅವನ ಮಗ ಹಾಲಬಸವಿ ದೇವ ಎಂಬ ಹೆಸರುಗಳು ತಿಳಿದುಬಂದಿವೆ. ಶಾಸನದ ಕೆಲವು ಭಾಗಗಳು ಜೀರ್ಣವಾಗಿರುವುದರಿಂದ ಅಲ್ಲಿ ಬಸವೇಶ್ವರನ ಮಗನ

ಹೆಸರು ತಿಳಿದುಬಂದಿಲ್ಲ. ಆದ್ದರಿಂದ ಬಸವೇಶ್ವರನಿಗೆ 'ಬಾಲಸಂಗ' ಎಂಬ ಮಗನಲ್ಲದೆ ಇತರ ಮಕ್ಕಳೂ ಇದ್ದಿರಬಹುದೆಂದೂ ಬಸವನ ಪ್ರಭಾವದ ದೆಸೆಯಿಂದ ಅವನ ಮಕ್ಕಳು ಮುಂದೆ ರಾಜರ ಮನ್ನಣೆಗೆ ಪಾತ್ರರಾಗಿರಬಹುದೆಂದೂ ನಾವು ತರ್ಕಿಸಬಹುದಾಗಿದೆ. ಈ ಶಾಸನದಲ್ಲಿ ಬಸವಣ್ಣನು ವೀರಶೈವ ಮತಸ್ಥಾಪಕನೆಂದು ಉಲ್ಲೇಖಿಸದಿರುವ ವಿಷಯ ವೀರಶೈವ ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ. ಜಗಳೂರು ಶಾಸನ (ನಂ. ೩೦) ರಲ್ಲಿ ಕೂಡ 'ಬಸವರಾಜ' ಎಂಬುದಾಗಿ ಬಸವಣ್ಣನವರ ಹೆಸರು ಬಂದಿದೆ. ಈ ಶಾಸನದ ಕಾಲ ಕ್ರಿ. ಶ. ೧೨೭೯ ಎಂದಾಗಿದೆ.

೩. ಬಸವಣ್ಣನ ಚರಿತ್ರೆಗೆ ನಿಕಟ ಸಂಬಂಧವುಳ್ಳ 'ಅಕ್ಕನಾಗಮ್ಮ' ಬಸವಣ್ಣನ ಸಹೋದರಿಯಾಗಿರಬೇಕು. ಬಸವಣ್ಣನು ಬಾಗೇವಾಡಿಯಿಂದ ಸಂಗಮಕ್ಕೆ ಹೋಗುವಾಗ ತತ್ವನಿಷ್ಠಳಾದ ಇವಳು ತಮ್ಮನ ಸಂಗಡ ಸಂಗಮೇಶ್ವರಕ್ಕೆ ನಡೆದಿರಬೇಕು. ಕೂಡಲ ಸಂಗಮ ಕ್ಷೇತ್ರದಲ್ಲಿ ಶ್ರೀ ಜಾತವೇದ ಸ್ವಾಮಿಗಳ ಅನುಗ್ರಹಕ್ಕೆ ಪಾತ್ರನಾಗಿದ್ದ ಶಿವಸ್ವಾಮಿಯೆಂಬ ಮಹಾತ್ಮನ ಕೂಡ ಈಕೆಯ ಲಗ್ನವಾಗಿರಬೇಕು. ಚೆನ್ನಬಸವಣ್ಣನು ಕೂಡಲ ಸಂಗಮದಲ್ಲಿಯೇ ಹುಟ್ಟಿ ತನ್ನ ಬಾಲ್ಯದ ವಿದ್ಯಾಭ್ಯಾಸವನ್ನು ಅಲ್ಲಿಯೇ ಮುಗಿಸಿರಬೇಕು. ಈ ವಿಷಯದಲ್ಲಿ ಸಿಂಗಿರಾಜ ಪುರಾಣವು ನಮಗೆ ಒಳ್ಳೆಯ ದಾರಿಯನ್ನು ತೋರಿಸುತ್ತದೆ. ಮೇಲಿನ ವಿಷಯಗಳನ್ನು ನಾವು ಒಪ್ಪಿಕೊಳ್ಳದಿದ್ದರೆ ಬಸವಣ್ಣನವರ, ಚೆನ್ನಬಸವಣ್ಣನವರ ಚರಿತ್ರೆಯಲ್ಲಿ ಪರಸ್ಪರ ಸಂಬಂಧವೇ ತಪ್ಪಿಹೋಗುತ್ತದೆ. ಮಾದಿರಾಜನು ಗಂಡು ಮಗನಿಗಾಗಿ ನಂದಿವ್ರತ ಮಾಡಿದನೆಂದು ತಿಳಿಯುವುದು ಸಾಧುವಾಗಿದೆ. ಅಂದರೆ ಆತನಿಗೆ ಅಕ್ಕನಾಗಮ್ಮ ಎಂಬ ಮಗಳೊಬ್ಬಳಿದ್ದಳೆಂಬುದು ಗಮನಾರ್ಹ ಸಂಗತಿಯಾಗಿದೆ.

೪. ಇಂಗಳೇಶ್ವರ ಬಾಗೇವಾಡಿಯು ಬಸವಣ್ಣನು ಹುಟ್ಟುವ ಕಾಲದಲ್ಲಿ ಅತ್ಯಂತ ಪ್ರಸಿದ್ಧವಾದ ಐತಿಹಾಸಿಕ ಸ್ಥಳವಾಗಿದ್ದಿತು. ಶ್ರೀ ರೇವಣಸಿದ್ಧೇಶ್ವರನ ಗವಿಯು ಇಂಗಳೇಶ್ವರದಲ್ಲುಂಟು. ರಾಜಕಾರಣಿಯಾದ ರೇವಣಸಿದ್ಧನು ಬಿಜ್ಜಳನ ತಂದೆಯಾದ ಪೆರ್ಮಾಡಿರಾಯನ ಹಿತಚಿಂತಕನಾಗಿದ್ದು ಕಲ್ಯಾಣದ

ಕ್ರಾಂತಿಗೆ ಸಹಾಯನಾಗಿದ್ದಿರಬಹುದು. ಕಲ್ಯಾಣದಲ್ಲಿ ವೀರಶೈವರ ಪ್ರಾಬಲ್ಯವು ಬರಲು ಈ ಪರಿಸ್ಥಿತಿಯು ಕಾರಣವಾಗಿರಬಹುದು. ಅದು ಕಾರಣವೇ ತರ್ದೆವಾಡಿ ನಾಡಿನ ರಾಜಧಾನಿಯಾದ ಇಂಗಳೇಶ್ವರದಲ್ಲಿ ಶ್ರೀ ರೇವಣಸಿದ್ಧನ ದೇವಾಲಯವು ನಿರ್ಮಿತವಾಗಿರಬೇಕೆಂದು ತಿಳಿಯಲು ಆಸ್ಪದವಿದೆ.

೫. ಬಸವಣ್ಣನ ಮಂತ್ರಿತ್ವವು ಪ್ರಭಾವಪೂರ್ಣವಾಗಲು ಬನವಾಸಿ ಪ್ರಾಂತದ ಕೇಶಿರಾಜ ದಂಡನಾಯಕ, ಕಲ್ಯಾಣದಲ್ಲಿಯೇ ಇದ್ದ ಬಿಬ್ಬಿಬಾಚರಸ, ಸೊಲ್ಲಾಪುರ ಪ್ರಾಂತದಲ್ಲಿದ್ದ ಸೊಡ್ಡಳ ಬಾಚರಸ ಮೊದಲಾದ ವೀರ ಪುರುಷರು ಕಾರಣವಾಗಿರಬೇಕು. ಚಕ್ರವರ್ತಿಯು ಕಣ್ಗಾವಲಿಯಾದ ಮೇಲೆಯೂ ಲಿಂಗವಂತರು ಕಲ್ಯಾಣ ಪಟ್ಟಣದಿಂದ ಪ್ರಾಣಸಹಿತ ಹೊರಡಲು ಸಾಧ್ಯವಾದುದು ಈ ವೀರಪುರುಷರ ಸಹಾಯದಿಂದಲೇ ಆಗಿರಬೇಕು.

೬. ಬಸವಣ್ಣನವರ ಕ್ರಾಂತಿಯು ಬಲವತ್ತರವೆನಿಸಲು ಅವರ ಸಮಕಾಲೀನರಾದ ಮಹಾಪುರುಷರು ಅಂದರೆ, ಅಲ್ಲಮ ಪ್ರಭು, ಚೆನ್ನಬಸವೇಶ್ವರ, ಅಕ್ಕಮಹಾದೇವಿ, ಮಡಿವಳಮಾಚಯ್ಯ, ಸಿದ್ಧರಾಮೇಶ್ವರ, ಸಕಲೇಶ ಮಾದರಸ, ರುದ್ರಮುನಿಸ್ವಾಮಿ, ಕಿನ್ನರಿ ಬ್ರಹ್ಮಯ್ಯ, ಮೊದಲಾದ ಶರಣರು ಮುಖ್ಯ ಕಾರಣರೆಂಬುದನ್ನು ನಾವು ಸದಾ ನೆನಪಿನಲ್ಲಿಟ್ಟುಕೊಳ್ಳಬೇಕು.

## ಬಸವಣ್ಣನವರ ಗ್ರಂಥಗಳು

ಶ್ರೀ ಬಸವೇಶ್ವರನು ಷಟ್‌ಸ್ಥಲ ವಚನ, ಶಿಖಾರತ್ನವಚನ, ಕಾಲಜ್ಞಾನ ವಚನ, ಮಂತ್ರಗೋಪ್ಯ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಷಟ್‌ಸ್ಥಲ ವಚನ ಮಾತ್ರ ಪ್ರಕಟವಾಗಿದೆ. ಉಳಿದ ಮೂರು ಗ್ರಂಥಗಳು ತಾಳೆಯೋಲೆಯ ಸೆರೆಮನೆಯಲ್ಲಿವೆ. ಆ ಗ್ರಂಥಗಳ ಪ್ರಕಟನೆಯನ್ನು ಕೈಗೊಳ್ಳುವುದು ಅತ್ಯವಶ್ಯವಾಗಿದೆ. ಈ ಮಹತ್ವದ ಗ್ರಂಥಗಳ ಪ್ರಕಟನೆಯಿಂದ ಬಸವಣ್ಣನವರ ಚರಿತ್ರೆಯ ಮೇಲೂ ಕನ್ನಡ ಸಾಹಿತ್ಯದ ಮೇಲೂ ಒಳ್ಳೆಯ ಪ್ರಕಾಶ ಬೀಳಬಹುದೆಂದು ತೋರುತ್ತದೆ.

## ಉಪಸಂಹಾರ

ಬಿಜ್ಜಳನ ಕೊಲೆಯ ವಿಷಯದಲ್ಲಿ ಶಿವಶರಣರಲ್ಲಿ ಭಿನ್ನಾಭಿಪ್ರಾಯಗಳಾಗಿ ಸೌಮ್ಯಪಕ್ಷದ ಬಸವಣ್ಣ, ಪ್ರಭುದೇವ, ಸಿದ್ಧರಾಮಾದಿಗಳು ಮೊದಲೇ ಕಲ್ಯಾಣವನ್ನು ಬಿಟ್ಟು ಹೋಗಿರಬೇಕೆಂದು ತೋರುತ್ತದೆ. ಅಲ್ಲಿ ಉಳಿದ ಉಗ್ರಪಕ್ಷದ ಮಾಚಯ್ಯ, ರುದ್ರಮುನಿ, ಚೆನ್ನಬಸವಾದಿಗಳೇ ಗಣಾಚಾರದ ದೃಷ್ಟಿಯಿಂದ ಆ ಕ್ರಾಂತಿಯನ್ನು ನಡೆಸಿದರೆಂದು ಕಾಲಜ್ಞಾನ ವಚನಗಳಿಂದ ತಿಳಿದು ಬಂದಿದೆ.

ಶ್ರೀ ಬಸವೇಶ್ವರನ ಚರಿತ್ರೆಯು ತೇಜಃಪುಂಜವಾಗಿದೆ. ಕ್ರಾಂತಿಕಾರಕವಾಗಿದೆ. ಉದಾತ್ತಭಾವಗಳಿಂದ ಕೂಡಿದೆ. ದುಃಖಾಂತ ನಾಟಕಗಳಂತೆ ವಾಚಕರ ಮನಸ್ಸಿನ ಮೇಲೆ ವಿಚಾರ ಕ್ರಾಂತಿಯನ್ನು ಉಂಟುಮಾಡತಕ್ಕದಾಗಿದೆ. ಪುಣ್ಯಪ್ರದವಾಗಿದೆ. ಪ್ರಭಾವ ಪೂರ್ಣವಾಗಿದೆ. ಇಂತಹ ದಿವ್ಯಚರಿತ್ರೆಯು ಸಂಶೋಧನೆಯ ಅಭಾವದಿಂದ ಈಗಿನಂತಹ ಪ್ರಬುದ್ಧಕಾಲದಲ್ಲಿಯೂ ಕೂಡ ಅಪೂರ್ಣವಾಗಿದೆಯೆಂದು ನಾವು ಹೇಳಿಕೊಳ್ಳುತ್ತಿರುವುದು ಕೇವಲ ನಮ್ಮಗಳ ದುರ್ದೈವವೇ ಅಗಿದೆ.

## ಶ್ರೀ ಬಸವ ಕ್ಷೇತ್ರಗಳು

### ೧. ಬಾಗೇವಾಡಿ:—

ಈ ಪಟ್ಟಣವು ಬಿಜಾಪುರ ಜಿಲ್ಲೆಯಲ್ಲಿದೆ. ಬಸವಣ್ಣನ ತಂದೆ ತಾಯಿಗಳಾದ ಮಾದಿರಾಜ-ಮಾದಲಾಂಬಿಕೆಯರು ನಂದಿವ್ರತವನ್ನು ಮಾಡಿದ ಶಿವದೇವಾಲಯವು,—೧೨ನೇ ಶತಮಾನದ ಹಿಂದಿನ ಕಟ್ಟಡವೆಂಬಷ್ಟು— ಪುರಾತನವಾಗಿ ನಮ್ಮ ಕಣ್ಣಿಗೆ ಕಾಣುತ್ತದೆ. ಪೂರ್ವದಲ್ಲಿ ಈ ದೇವಾಲಯವನ್ನು ಸಂಗಮೇಶ್ವರ ದೇವಾಲಯ ಎನ್ನುತ್ತಿದ್ದರು. ಈಗ ಅದನ್ನು ಬಸವೇಶ್ವರ ಗುಡಿ ಎನ್ನುತ್ತಾರೆ. ಈ ಗುಡಿಯ ಪಕ್ಕದಲ್ಲಿ ಒಂದು ಪುಷ್ಕರಣಿ ಇದೆ. ವರ್ಷಕ್ಕೊಮ್ಮೆ ಅಲ್ಲಿ ಜಾತ್ರೆಯಾಗುತ್ತದೆ. ಈ ಊರಿನಲ್ಲಿ ವಚನ ಶಾಸ್ತ್ರವನ್ನು ದೇವರಂತೆ ಗದ್ದುಗೆಯ ಮೇಲಿಟ್ಟು ಪೂಜಿಸುವ ಒಂದು ಮಠವುಂಟು. ಈ ಊರಿನ ಅಕ್ಕಪಕ್ಕದಲ್ಲಿ ಹಲವು ಶಿಲಾಶಾಸನಗಳು ದಿಕ್ಕಿಲ್ಲದೆ ಬಿದ್ದಿವೆ. ಶ್ರೀ

ದೇವಾಲಯದಲ್ಲಿ ಅಲ್ಲಿನ ಶಿವಲಿಂಗಕ್ಕಿಂತ ಅದರ ಮುಂದಿನ ವೃಷಭನಿಗೆ ಹೆಚ್ಚಿನ ಪೂಜೆಪುರಸ್ಕಾರಗಳು ಸಲ್ಲುತ್ತಿವೆ. ಇದಕ್ಕೆ ಅಲ್ಲಿ ಆಗಿಹೋದ ಬಸವಣ್ಣನ ಅವತಾರವೇ ಕಾರಣವೆಂದು ಹೇಳಬಹುದು.

ಬಾಗೆವಾಡಿಯಲ್ಲಿ ಬಸವಣ್ಣನವರ ವಂಶೀಯರಾದ ಶೈವಬ್ರಾಹ್ಮಣ ಮನೆತನದವರು ಇದ್ದಾರೆ. ಶ್ರೀಶೈಲಕ್ಕೆ ಪ್ರತಿವರ್ಷ ಇವರು ಶ್ರೀ ಬಸವಣ್ಣನ ಹೆಸರಿನಲ್ಲಿ ಕಂಬಿಯನ್ನು ಕಳಿಸುತ್ತಾರೆ. ಆಗ ಶ್ರೀಶೈಲದಲ್ಲಿ ಎಲ್ಲ ಕಂಬಿಗಳಿಗಿಂತಲೂ ಈ ಬಸವನ ಕಂಬಿಗೆ ಅಗ್ರಪೂಜೆ ಸಲ್ಲುತ್ತದೆ. ಇದು ಗಮನಾರ್ಹವಾದ ಸಂಗತಿ.

೨. ಇಂಗಳೇಶ್ವರ

ಇಂಗಳೇಶ್ವರವು ಬಾಗೆವಾಡಿಗೆ ಸುಮಾರು ೬ ಮೈಲಿ ದೂರದಲ್ಲಿದೆ. ಪೂರ್ವದಲ್ಲಿ ಇದು ಬಹುದೊಡ್ಡ ಪಟ್ಟಣವೆನಿಸಿದ್ದಿತು. ಬಸವ ಪುರಾಣಗಳಲ್ಲಿ ಬಾಗೆವಾಡಿಯನ್ನು 'ಇಂಗಳೇಶ್ವರ ಬಾಗೆವಾಡಿ' ಎಂದು ಕವಿಗಳು ಕರೆದಿದ್ದಾರೆ. ಅಂದರೆ, ಇಂಗಳೇಶ್ವರವೆಂಬ ಪಟ್ಟಣಕ್ಕೆ ಬಾಗೆವಾಡಿಯು ಶಾಖಾನಗರ (ವಿಸ್ತರಣ)ವಾಗಿದ್ದಿತೆಂದು ನಾವು ತಿಳಿಯಬೇಕಾಗಿದೆ. ಶಾಸನಗಳಲ್ಲಿ ಈ ಊರಿಗೆ 'ತಿಂಗಳೇಶ್ವರ'ಎಂದಿದೆ.

ಈ ತಿಂಗಳೇಶ್ವರದಲ್ಲಿ ರೇವಣಸಿದ್ಧೇಶ್ವರನ ಗವಿ, ಅಕ್ಕನಾಗಮ್ಮನ ಗವಿ, ಸೋಮೇಶ್ವರ ದೇವಾಲಯ, ಮೊದಲಾದ ಹಲವು ದೇವಾಲಯಗಳೂ, ಶಿಲಾಶಾಸನಗಳೂ, ನಿಪದಿಗಲ್ಲುಗಳೂ, ಗೋಗ್ರಹಣ ಕಲ್ಲುಗಳೂ ಕಣ್ಣಿಗೆ ಬೀಳುತ್ತವೆ. ಇಲ್ಲಿ ದೇವಗಿರಿಯ ಯಾದವರ ಮತ್ತು ಕಾಲಚೂರ್ಯರ ಶಿಲಾಶಾಸನಗಳಿವೆ. ಇವುಗಳೆಲ್ಲ ಪ್ರಕಟವಾದರೆ ನಮ್ಮ ಚರಿತ್ರೆಯ ಮೇಲೆ ಒಳ್ಳೇ ತೇಜಸ್ಸು ಬೀಳುತ್ತದೆ.

ಚಂದ್ರಪ್ರಭ ಪುರಾಣವನ್ನು ಬರೆದ ಅಗ್ಗಳ ಮಹಾಕವಿಯು ಈ ಇಂಗಳೇಶ್ವರ ಊರಿನವನು. "ಸುರರಾಜಾರ್ಜಿತ ತಿಂಗಳೇಶ್ವರಪುರ ಶ್ರೀತೀರ್ಥ ಚಂದ್ರಪ್ರಭಂ ಪರಮೇಶಂ" ಎಂದು ಆ ಕವಿ ಹೇಳಿದ್ದಾನೆ. ಆದ್ದರಿಂದ ಅವನು ಇದೇ ಊರಿನವನೆಂದೂ ಆ ಕಾಲದಲ್ಲಿ ಚಂದ್ರಪ್ರಭನ ಗುಡಿಯು

ಇಲ್ಲಿ ಪ್ರಸಿದ್ಧವಾಗಿತ್ತೆಂದೂ ಹೇಳಬೇಕಾಗುತ್ತದೆ. ಆದರೆ ಈಗ ಆ ಊರಿನಲ್ಲಿ ಚಂದ್ರಪ್ರಭನ ಗುಡಿ ಇಲ್ಲ. ಆ ಬಸದಿ ಈಗ ನೆಲಸಮವಾಗಿದೆ. ಆ ಚಂದ್ರಪ್ರಭ ಮೂರ್ತಿಯು ರೇವಣಸಿದ್ಧನ ಗವಿಯ ಒಂದು ಮೂಲೆಯಲ್ಲಿದೆ. ಒಂದುಕಾಲ ದಲ್ಲಿ ಜೈನಧರ್ಮದ ನೆಲೆವೀಡಾಗಿದ್ದ ಈ ಊರಿನಲ್ಲಿ ಈಗ ಒಬ್ಬ ಜೈನನೂ ಇಲ್ಲ ದಿರುವುದೂ ಊರಿಗೆ ಊರೇ ಲಿಂಗವಂತರಾಗಿರುವುದೂ ಗಮನಾರ್ಹವಾಗಿದೆ. ಶ್ರೀ ರೇವಣಸಿದ್ಧನು ಈ ಭಾಗದಲ್ಲಿ ಕೆಲವು ಕಾಲವಿದ್ದು ವೀರಶೈವಧರ್ಮ ಪ್ರ ಚಾರವನ್ನು ನಡೆಯಿಸಿದುದೇ ಇಂತಹ ಬದಲಾವಣೆಗೆ ಕಾರಣವೆಂದು ಹೇಳಬ ಹುದು. ಬಸವಣ್ಣನ ಬಾಲ್ಯದಲ್ಲಿ ಆಚಾರ್ಯ ರೇವಣಸಿದ್ಧನಿಂದ ವೀರಶೈವ ಧರ್ಮ ಪ್ರಚಾರದ ಚಳುವಳಿಯು ಈಭಾಗದಲ್ಲಿ ಹೆಚ್ಚಾಗಿದ್ದಿತು. ಬಸವಣ್ಣನು ವೀರಶೈವ ಧರ್ಮವನ್ನು ಸ್ವೀಕರಿಸಲು ಇದೇ ಕಾರಣವಾಯಿತೆಂದು ಅನುಮಾನಿ ಸಲು ಅವಕಾಶವಿದೆ. ಮುಖ್ಯವಾಗಿ ಬಾಗೇವಾಡಿ ಮತ್ತು ಇಂಗಳೇಶ್ವರವು ದರ್ಶ ನಾರ್ಹವಾಗಿವೆ. ಇಲ್ಲಿ ಹಲವು ಶಿಲಾಶಾಸಗಳು ತಮ್ಮ ಗತವೈಭವವನ್ನು ಕುರಿತು ಕಣ್ಣೀರು ಸುರಿಸುತ್ತ ಭೂಮಿಯ ಮೇಲೆ ಬಿದ್ದಿವೆ. ಇತಿಹಾಸ ಸಂಶೋಧಕರಿಗೆ ಇಲ್ಲಿ ಒಳ್ಳೇ ಆಹಾರ ಸಿಗುತ್ತದೆ.

**೩. ಕೂಡಲ ಸಂಗಮ:—**

ಇದು ಬಿಜಾಪುರ ಜಿಲ್ಲೆಯಲ್ಲಿ ಕೃಷ್ಣಾನದಿ ಮತ್ತು ಮಲಪ್ರಭಾ ನದಿಗಳ ಸಂಗಮದಲ್ಲಿದೆ. ಇಲ್ಲಿ ಹೊಯ್ಸಳ ರಾಜರಿಂದ ನಿರ್ಮಿತವಾದ ಒಂದು ದೊಡ್ಡ ಶಿವ ದೇವಾಲಯವಿದೆ. ಆ ಗುಡಿಯ ಪಕ್ಕದಲ್ಲಿ 'ಸಾರಂಗಪಾಣಿ ಮಠ' ಎಂಬ ಲಿಂಗಾಯತರ ಒಂದು ಮಠವಿದೆ- ಹರಿಹರನು ಹೇಳುವ "ಈಶಾನ್ಯ ಗುರು" ಸಿಂಗಿರಾಜನು ಹೇಳುವ 'ಜಾತವೇದಸ್ವಾಮಿ' ಈ ಮಠದ ಸ್ವಾಮಿಯಾಗಿರ ಬೇಕು. ಬಸವಣ್ಣನ ಭವಿಷ್ಯವನ್ನು ತಿಳಿದು ಬಾಗೇವಾಡಿಗೆ ಬಂದು ಬಸವ ನಿಗೆ ಲಿಂಗಧಾರಣ ಮಾಡಿದ ಮಹಾತ್ಮನು ಈತನೇ ಆಗಿರಬೇಕು. ಇವನ ಪಾದಗಳು ಕಪ್ಪಾಗಿದ್ದುದರಿಂದಲೂ ಮಾತುಮಾತಿಗೆ ಇವನು'ಸಂಗಮ'ಎನ್ನುತ್ತಿ ದ್ದುದರಿಂದಲೂ ಇವನಿಗೆ 'ಕಪ್ಪಡಿ ಸಂಗಮ' ಎಂಬ ಹೆಸರು ಬಂದಿದೆ. ಕ್ಷೇತ್ರವು ದರ್ಶನಾರ್ಹವಾಗಿದೆ. ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ.

**೪. ಕಲ್ಯಾಣ ಪಟ್ಟಣ:—**

ಇದು ಹೈದ್ರಾಬಾದ್ ಕರ್ನಾಟಕದಲ್ಲಿ ಕಲ್ಬುರ್ಗಿಗೆ ೬೦ ಮೈಲಿ ದೂರದಲ್ಲಿದೆ. ಇಲ್ಲಿ ಬಸವಪುರಾಣಗಳಲ್ಲಿ ಹೇಳಿದ ಎಲ್ಲ ಸ್ಮಾರಕಗಳೂ ಇವೆ. ಬಿಜ್ಜಳನ ಅರಮನೆ, ಬಸವಣ್ಣನ ಮಹಾಮನೆ,ಅನುಭವ ಮಂಟಪ ಇವು ಅದೃಶ್ಯವಾಗಿವೆ. ತ್ರಿಪುರಾಂತಕನ ಕೆರೆ, ಅಕ್ಕನಾಗಮ್ಮನ ಗವಿ, ಪಂಚ ಗವಿಗಳು, ಮೋಳಿಗೆ ಮಾರಯ್ಯನ ಗವಿ, ಮಡಿವಾಳಯ್ಯನ ಗುಡಿ, ನುಲಿಚಂದಯ್ಯನ ಗವಿ, ಘನಲಿಂಗ ರುದ್ರಮುನಿ ಗವಿ, ವೇಮನಾರಾಧ್ಯರ ಮಠ, ಬಿಲ್ವಪತ್ರೆಯ ವನ, ಮಾಚಯ್ಯನ ಕೆರೆ ಈಗಲೂ ಇಲ್ಲಿ ಸಂದರ್ಶನಾರ್ಹವಾಗಿವೆ. 'ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣ ಕಲ್ಪಂಪುರಂ' ಎಂದು ಹಿಂದಿನ ಕವಿಗಳು ಹಾಡಿದ ನಗರವಿಂದು ಕಣ್ಣೀರು ಕರೆಯುತ್ತಿದೆ.

ಇಂದಿನ ಕಲ್ಯಾಣಕ್ಕೆ ೧೦ ಮೈಲಿ ದೂರದಲ್ಲಿ ಮೋಳಿಗಯ್ಯನ ಗವಿಯಿದೆ. ೫ ಮೈಲಿ ದೂರದಲ್ಲಿ ಅರಳಯ್ಯನ ಹೊಂಡವಿದೆ. ಈ ಪಟ್ಟಣವು ಕ್ರಿ.ಶ. ೧೦೫೩ರಲ್ಲಿ ಆಹವಮಲ್ಲ ಸೋಮೇಶ್ವರನ ಕಾಲದಲ್ಲಿ (ಕ್ರಿ.ಶ. ೧೦೪೨-೧೦೬೮) ಕಟ್ಟಲ್ಪಟ್ಟಿತೆಂದು ತಿಳಿದುಬಂದಿದೆ. ಇದಕ್ಕೆ ಮೊದಲು 'ಪೊಟ್ಟಲಕೆರೆ' ಚಾಲುಕ್ಯರ ರಾಜಧಾನಿಯಾಗಿತ್ತು. ಚಾಲುಕ್ಯ ವಿಕ್ರಮನ ಕಾಲದಲ್ಲಿ ಈ ನಗರವು ಇಡೀ ಭಾರತದಲ್ಲಿಯೇ ಅಗ್ರಗಣ್ಯವಾಗಿತ್ತು.

ತನ್ನ ವೈಭವದ ಕಾಲದಲ್ಲಿ ಈ ಪಟ್ಟಣವು ಹತ್ತೆಂಟುಲಕ್ಷ ಜನಸಂಖ್ಯೆಯುಳ್ಳ ನಗರವಾಗಿದ್ದಿರಬೇಕು. ಉತ್ತರದಿಂದ ಬಂದ ಮುಸಲ್ಮಾನರ ದಾಳಿಗೆ ಸಿಕ್ಕಿದ ಹಿಂದೂ ರಾಜಧಾನಿಗಳಲ್ಲಿ ದೇವಗಿರಿ, ಓರುಂಗಲ್ಲುಗಳ ಜತೆಯಲ್ಲಿಯೇ ಕಲ್ಯಾಣವೂ ಗಣನಾರ್ಹವಾಗಿದೆ. ಹಿಂದಿನ ಕಾಲದ ಯಾವ ಗಣ್ಯ ಕಟ್ಟಡವೂ ಇಲ್ಲಿ ಉಳಿದಿಲ್ಲ. ಎಲ್ಲವನ್ನೂ ಶತ್ರುಗಳು ನೆಲಸಮಮಾಡಿದ್ದಾರೆ. ಇಲ್ಲಿರುವ ಪೀರ್‌ಪಾಚ್ಛಾನ ದರ್ಗದಲ್ಲಿ ಹಲವು ಪ್ರಾಚೀನ ಕಟ್ಟಡಗಳ ಅವಶೇಷವನ್ನೂ, ಶಿಲಾಲಿಪಿಗಳನ್ನು ಇಂದಿಗೂ ನೋಡಬಹುದಾಗಿದೆ. "ಕಾಲ ಪುರುಷಂಗೆ ಗುಣವುಣಮಿಲ್ಲಂಗಡ."



ಅನುಬಂಧ–೩.

# ಗ್ರಂಥಸ್ಥ ಶಿವಶರಣರು

೧. **ಅಪಿಚ ಪುರಾತನ ನೂತನಶಿವಗಣಃ** (ಪ. ೨) ಎಂಬಲ್ಲಿ ಪುರಾತನ ನೂತನ ಶರಣರು ಎಂದು ಕವಿ ಹೇಳಿದ್ದಾನೆ. ತಮಿಳು ನಾಡಿನಲ್ಲಿ ಪ್ರಸಿದ್ಧರಾದ ಪೆರಿಯ ಪುರಾಣದಲ್ಲಿ ಅಭಿವರ್ಣಿತರಾದ ವೀರಶೈವರಿಗೆ ಪೂಜ್ಯರೆನಿಸಿರುವ 'ಅರುವತ್ತು ಮೂವರು' ಶರಣರನ್ನು ಪುರಾತನ ಶರಣರೆಂದೂ, ಅಲ್ಲಿಂದೀಚಿನ ಅಂದರೆ ರೇವಣಸಿದ್ಧ, ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮಯ್ಯ ಮೊದಲಾದವರನ್ನು ನೂತನ ಶರಣರೆಂದೂ ವೀರಶೈವ ಕವಿಗಳು ಕರೆದಿದ್ದಾರೆ. ಹರಿಹರನ ರಘಟಾಕಾವ್ಯದಲ್ಲಿಯೂ, ಪಾಲುಕುರಿಕೆ ಸೋಮನಾಥನ ಗ್ರಂಥಗಳಲ್ಲಿಯೂ ಈ ವಿಧಾನವೇ ಉಂಟು.

೨. **ಅಲ್ಲಮಪ್ರಭುಃ—**(ಪ. ೩೫) ಈತನು ಶಿವಶರಣದಲ್ಲಿ ಅತ್ಯಂತ ಪ್ರಸಿದ್ಧನು. ಶಿವಮೊಗ್ಗಾ ಜಿಲ್ಲಾ ಬಳ್ಳಿಗಾವಿಯವನು. ಮಹಾವಿದ್ವಾಂಸನೂ ಶಿವಯೋಗಿಯೂ ಎನಿಸಿದ್ದನು. ಗಣಸಹಸ್ರದಲ್ಲಿ ಇವನ ಹೆಸರುಂಟು. ಕಲ್ಯಾಣದ ಅನುಭವಮಂಟಪಕ್ಕೆ ಅಧ್ಯಕ್ಷನಾಗಿದ್ದನು. ಇವನಿಗೆ 'ಮಾಯಾ ಕೋಲಾಹಲ' ಎಂಬ ಬಿರುದುಂಟು.

ಅಲ್ಲಮ ಪ್ರಭುವಿನ ಗುರುವು ಪಟ್ಟದ ಕಲ್ಲಿನ ಅನಿಮಿಷಯ್ಯ. ಅವನ ಗುರು ಪಟ್ಟದ ಕಲ್ಲಿನ ನಂದಿಕೇಶ್ವರ. ಇಂತಹ ಪ್ರತಿಭಾನ್ವಿತ ಗುರುಪರಂಪರೆಗೆ ಸೇರಿದವನು ಅಲ್ಲಮಪ್ರಭು.

ಈತನನ್ನು ಕುರಿತು ಹಂಪೆಯ ಹರೀಶ್ವರನು ಪ್ರಭುದೇವರ ರಗಳೆಯನ್ನೂ, ಚಾಮರಸನು ಪ್ರಭುಲಿಂಗ ಲೀಲೆಯನ್ನೂ, ಯಳಂದೂರು ಹರೀಶ್ವರನು ಪ್ರಭುದೇವರ ಪುರಾಣವನ್ನೂ ಬರೆದಿದ್ದಾರೆ. ತೆಲುಗಿನಲ್ಲಿ ಪಿಡುಪರ್ತಿ ಬಸವ ಮತ್ತು ಪಿಡುಪರ್ತಿ ಸೋಮ ಎಂಬ ಮಹಾಕವಿಗಳೂ, ತಮಿಳಿ

ನಲ್ಲಿ ಶಿವಪ್ರಕಾಶ ಸ್ವಾಮಿಗಳೂ ದಿವ್ಯವಾದ ಕಾವ್ಯಗಳನ್ನು ಬರೆದಿದ್ದಾರೆ. ಸಂಸ್ಕೃತ ಮತ್ತು ಮರಾಠಿಗಳಲ್ಲಿ ಕೂಡ ಪ್ರಭುಲಿಂಗಲೀಲೆಗಳುಂಟು.

ವಿದ್ವಾಂಸನಾದ ಈ ಮಹಾತ್ಮನು 'ಗುಹೇಶ್ವರ' ಎಂಬ ಅಂಕಿತದಿಂದ ಷಟ್ಸ್ಥಲ ಜ್ಞಾನ, ಮಂತ್ರಗೋಪ್ಯ, ಸೃಷ್ಟಿಯ ವಚನ, ಬೆಡಗಿನ ವಚನ, ಮಂತ್ರಮಾಹಾತ್ಮ್ಯ, ಕಾಲಜ್ಞಾನ ವಚನ, ಎಂಬ ಗ್ರಂಥಗಳನ್ನು ಬರೆದಿದ್ದಾನೆ. ವಿಜಯನಗದ ಪ್ರೌಢದೇವರಾಯನ ಮಂತ್ರಿ ಭಕ್ತಿಭಂಡಾರಿ ಜಕ್ಕಣಾ ಚಾರ್ಯನು ಪ್ರಭುದೇವರ ಷಟ್ಸ್ಥಲ ವಚನಕ್ಕೆ ವ್ಯಾಖ್ಯಾನ ಮಾಡಿದ್ದಾನೆ; ವೀರಶೈವ ಗುರುಗಳಲ್ಲಿ ಈ ಪ್ರಭುದೇವನು ಅತ್ಯಂತ ಪ್ರಸಿದ್ಧನು.

೩. **ಪಂಡಿತಾರಾಧ್ಯ:**—(ಪ. ೩೪) ಇವನು ಆಂಧ್ರದೇಶದ, ದ್ರಾಕ್ಷಾ ರಾಮ ಕ್ಷೇತ್ರದ, ಭೀಮೇಶ್ವರಲಿಂಗದ ಅರ್ಚಕ ಭೀಮನ ಪಂಡಿತನ ಮಗನು. ತಾಯಿ ಗೌರಾಂಬೆ. ಕೋಟಿಪಲ್ಲಾರಾಧ್ಯನಿಂದ ಶಿವದೀಕ್ಷೆಪಡೆದು ಲಿಂಗ ವಂತನಾದನು. ವೆಲ್ನಾಡಚೋಳನು ಇವನ ಕಣ್ಣು ಕೀಳಿಸಿದನು. ಶಿವ ಗಣರ ಸ್ತೋತ್ರಮಾಡಿ ಕಣ್ಣುಗಳನ್ನು ಪಡಕೊಂಡನು. ಇವನು ಬಸವನು ಕಳಿ ಸಿದ ಭಸಿತವನ್ನು ಧರಿಸಿದಕೂಡಲೇ ಇವನಿಗೆ ಕನ್ನಡ ಭಾಷಾಜ್ಞಾನವಾಯಿತು.

ಈತನು ದೊಡ್ಡ ವಿದ್ವಾಂಸನು. 'ಅಮರಗೊಂಡದ ಮಲ್ಲಿಕಾರ್ಜುನ' ಎಂಬ ಅಂಕಿತದಿಂದ ಒಂದು ವಚನ ಗ್ರಂಥವನ್ನು ಕನ್ನಡದಲ್ಲಿ ಬರೆದಿದ್ದಾನೆ. ಈತನು ಶಿವತತ್ವಸಾರನು, ಬಸವಗೀತೆ, ಇಷ್ಟಲಿಂಗಸ್ತೋತ್ರ, ಗಣಸಹಸ್ರ ನಾಮಾವಳಿ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಇವನು ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಉದ್ದಾಮ ಪಂಡಿತನು. ವೀರಶೈವ ಪಂಚಾ ಚಾರ್ಯರಲ್ಲಿಯೂ, ಪಂಡಿತತ್ರಯರಲ್ಲಿಯೂ ಇವನ ಹೆಸರಿದೆ. ಈ ಮಹಾ ವಿಭೂತಿಯನ್ನು ಕುರಿತು ತೆಲುಗಿನಲ್ಲಿ ಪಾಲ್ಕುರಿಕೆ ಸೋಮನೂ, ಕನ್ನಡದಲ್ಲಿ ನೀಲಕಂಠಾರ್ಯನೂ, ಸಂಸ್ಕೃತದಲ್ಲಿ ಗುರುರಾಜಕವಿಯೂ ಗ್ರಂಥಗಳನ್ನು ಬರೆದಿ ದ್ದಾರೆ. ತೆಲುಗಿನಲ್ಲಿ ಪ್ರಸಿದ್ಧ ಕವಿಯಾದ ಶ್ರೀನಾಥನು ಈತನ ಬಗ್ಗೆ ಮಹಾಕಾವ್ಯ ಬರೆದಿದ್ದಾನೆ. ಆಂಧ್ರದೇಶದಲ್ಲಿ ವೀರಶೈವಧರ್ಮ ಪ್ರಚಾರಕ್ಕಾಗಿ ಈತನು ತುಂಬಾ ಹೆಣಗಿದನು. ಆದ್ದರಿಂದಲೇ ಈತನು ಆಚಾರ್ಯ ಶ್ರೇಷ್ಠನೆನಿಸಿದನು.

ಶ್ರೀಶೈಲದಲ್ಲಿ ಈ ಪಂಡಿತಾರಾಧ್ಯರ ಪೀಠವಿದೆ. ಈತನು ಅಲ್ಲಿಯೇ ಬಯಲಾದಂತೆ ತಿಳಿದು ಬಂದಿದೆ. ಸಂಸ್ಕೃತ, ಆಂಧ್ರ, ಪಂಡಿತಾರಾಧ್ಯ ಚರಿತ್ರೆಗಳು ಪ್ರಕಟವಾಗಿವೆ. ಕನ್ನಡ ಪಂಡಿತಾರಾಧ್ಯರ ಚರಿತ್ರೆ ಪ್ರಕಟವಾಗಿಲ್ಲ. ಕನ್ನಡದಲ್ಲಿಯೂ ಈತನು ಶಿವತತ್ವಸಾರ ಬರೆದಂತೆ ಕಾಣುತ್ತದೆ. ತೆಲುಗು ಶಿವತತ್ವಸಾರವು ಅಚ್ಚಾಗಿದೆ. ಸೋಮನಾಥನ ಗಣಸಹಸ್ರದಲ್ಲಿ ಈತನ ಹೆಸರು ಬಂದಿದೆ.

೪. **ಮಡಿವಳ ಮಾಚಯ್ಯ:**—(ಪ. ೨೮) ಈತನು ಬಿಜಾಪುರ ಜಿಲ್ಲಾ ಹಿಪ್ಪರಿಗೆಯವನು. ಒಂದು ವಚನಗ್ರಂಥ ಬರೆದಿದ್ದಾನೆ. ಬಸವೇಶ್ವರನ ಧರ್ಮಪ್ರಚಾರದಲ್ಲಿ ಬಲಗೈಯಾಗಿದ್ದನು. ಇವನು ಶರಣರ ಬಟ್ಟೆ ತೊಳೆಯುವ ಕಾಯಕ ಮಾಡುತ್ತಿದ್ದನು. ಶಿವಶರಣರ ಮನದ ಮೈಲಿಗೆಯನ್ನು ಹೋಗಲಾಡಿಸುವ ಕಾರ್ಯವನ್ನೂ ಮಾಡುತ್ತಿದ್ದನು. ಕಲ್ಯಾಣದ ಕ್ರಾಂತಿಗೆ ಇವನು ಪ್ರಧಾನ ಪುರುಷನೆನಿಸಿದನು. ಅನುಭವ ಮಂಟಪದಲ್ಲಿ ಪ್ರಧಾನ ಪಾತ್ರ ವಹಿಸಿದನು. ಈತನು ವೀರಭದ್ರಾವತಾರಿಯೆಂದು ಲಿಂಗವಂತರ ನಂಬುಗೆ. ಗಣಸಹಸ್ರದಲ್ಲಿ ಇವನ ಹೆಸರುಂಟು. ಹಿಪ್ಪರಿಗೆಯಲ್ಲಿ ಇವನ ಸಮಾಧಿಯುಂಟು. ಈತನನ್ನು ಕುರಿತು ಮಾಚಿದೇವ ಮನೋವಿಲಾಸ, ಮಡಿವಳ ಸಾಂಗತ್ಯ, ಮಡಿವಳ ಚರಿತೆ ಇತ್ಯಾದಿ ಗ್ರಂಥಗಳಿವೆ.

೫. **ಕಿನ್ನರಿ ಬ್ರಹ್ಮಯ್ಯ:**—(ಪ. ೨೨) ಅನುಭವ ಮಂಟಪದಲ್ಲಿನವನು ಸುಪ್ರಸಿದ್ಧನು. ಸಂಗೀತಗಾರನು. ಕಲ್ಯಾಣದಲ್ಲಿ ತ್ರಿಪುರಾಂತಕೇಶ್ವರನ ಮುಂದೆ ಕಿನ್ನರಿಯನ್ನು ನುಡಿಸಿ ಶಿವನ ಅನುಗ್ರಹ ಪಡೆದು ದಿನವೂ ಹನ್ನೊಂದು ಹೊನ್ನು ಪಡೆದು ಜಂಗಮಾರಾಧನೆ ನಡೆಸುತ್ತಿದ್ದನು.

ಇವನು ಹೂದೂರಿನ ಶಿವಭಕ್ತೆ ಕಲಿದೇವಿಯ ಮಗನು. ಅಕ್ಕಸಾಲೆಯ ಕೆಲಸ ಮಾಡುತ್ತಿದ್ದನು. ಬಸವನ ಕೀರ್ತಿಯನ್ನು ಕೇಳಿ ಕಲ್ಯಾಣಕ್ಕೆ ಬಂದನು. ಇವನ ಸಂಗೀತದಿಂದ ಶರಣರು ಸಂತಸಗೊಳ್ಳುತ್ತಿದ್ದರು.

೬. **ಕನ್ನದ ಬ್ರಹ್ಮಯ್ಯ:**—(ಪ ೨೨) ಈತನು ಕಲ್ಯಾಣ ಪಟ್ಟಣದಲ್ಲಿ ಮನೆಗಳಿಗೆ ಕನ್ನಹಾಕುವ ಕಾಯಕ ಕೈಗೊಂಡು ಜಂಗಮ ದಾಸೋಹ

ವನ್ನು ಮಾಡುತ್ತಿದ್ದನು. ಶಿವಭಕ್ತರ ಮನೆಗಳಿಗೆ ಮಾತ್ರ ಕನ್ನವನ್ನು ಹಾಕುತ್ತಿರಲಿಲ್ಲ. ಅಕಸ್ಮಾತ್ತಾಗಿ ಶಿವಭಕ್ತರ ಮನೆಗೆ ಕನ್ನಹಾಕಿ ಅದು ಭಕ್ತರ ಮನೆಯೆಂದು ತಿಳಿದರೆ ಮನೆಯವರನ್ನು ಎಚ್ಚರಿಸಿ ಅವರನ್ನು ಅಭಿವಂದಿಸಿ ಬರುತ್ತಿದ್ದನು. ಭಕ್ತರಲ್ಲದವರ ಮನೆಗೆ ನಿರ್ಭಯವಾಗಿ ಕನ್ನಹಾಕುತ್ತಿದ್ದನು. ಒಮ್ಮೆ ಬಿಜ್ಜಳರಾಯನ ಅರಮನೆಗೆ ನಡುಹಗಲಿನಲ್ಲಿಯೇ ಕನ್ನ ಹಾಕಿದನು. ಇವನ ಕನ್ನದಕತ್ತಿ ಮುಟ್ಟಿದ ಗೋಡೆಯೆಲ್ಲಾ ಚಿನ್ನವಾಯಿತು. ಅರಸ ಬಿಜ್ಜಳನು ಈ ವಾರ್ತೆಯನ್ನು ಕೇಳಿ ಸೋಜಿಗಪಟ್ಟನು. ಬಸವೇಶ್ವರನು ಕನ್ನದ ಬೊಮ್ಮಯ್ಯನ ಕಥೆಯನ್ನು ಬಿಜ್ಜಳನಿಗೆ ಹೇಳಿದನು. ಇವನು ಸ್ವಾರ್ಥವನ್ನುಳಿದು ಕೇವಲ ಗುರು ಲಿಂಗ ಜಂಗಮರ ಸೇವೆಗೆ ಕನ್ನವನ್ನು ಹಾಕುತ್ತಿದ್ದನು. ಆದ್ದರಿಂದ ಇವನು ಶಿವಶರಣನೆಂದು ಪ್ರಸಿದ್ಧನಾದನು. ಭಕ್ತಕಬೀರನು ಸಂತರ ಸೇವೆಗೋಸ್ಕರ ತುಡುಗು ಮಾಡಿದ ಕಥೆ ಅವನ ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆಯಷ್ಟೆ. ತೆಲುಗು ಮತ್ತು ಕನ್ನಡ ಬಸವ ಪುರಾಣಗಳಲ್ಲಿ ಇವನ ಕಥೆಯು ರಮಣೀಯವಾಗಿದೆ. ಇವನು ಗಣ ಸಹಸ್ರದಲ್ಲಿ ಸೇರಿರುವನು.

೬. **ಶಿವನಾಗಯ್ಯ:**—(ಪ. ೧೦) ಇವನು ಕಲ್ಯಾಣದ ಚಲವಾದಿಗಳಲ್ಲಿ ಹುಟ್ಟಿದನು. ನಿರ್ಮಲಜ್ಞಾನಿಯಾಗಿ ಶಿವಶರಣನೆನಿಸಿದನು. ಬಸವ ಪುರಾಣಗಳಲ್ಲಿ ಕಂಬಳಿ ನಾಗಯ್ಯ, ಶಿವನಾಗಿಮಯ್ಯ ಎಂದು ಮೊದಲಾಗಿ ಇವನು ಕರೆಯಲ್ಪಟ್ಟದ್ದಾನೆ.

ಬಸವಣ್ಣನು ಇವನ ಹಸ್ತದಿಂದ ಹಾಲನ್ನು ಸುರಿಸಿ ಬಿಜ್ಜಳನ ಸಭೆಯಲ್ಲಿ ಪವಾಡವನ್ನು ಮೆರೆದನು. ಕಡಿಮೆಯ ಕುಲದಲ್ಲಿ ಹುಟ್ಟಿದರೂ ಸನ್ಮಾರ್ಗದಿಂದ ಉನ್ನತನಾಗಬಹುದೆಂಬುದಕ್ಕೆ ಇವನ ಕಥೆ ನಿದರ್ಶನವಾಗಿದೆ. ಗಣಸಹಸ್ರದಲ್ಲಿ ಇವನ ಹೆಸರುಂಟು.

ಈ ಮೇಲೆ ಕಂಡ ಅಲ್ಲಮಪ್ರಭು, ಪಂಡಿತಾರಾಧ್ಯ, ಮಡಿವಳ ಮಾಚಯ್ಯ, ಕಿನ್ನರಿ ಬ್ರಹ್ಮಯ್ಯ, ಶಿವನಾಗಮಯ್ಯ, ಕನ್ನದ ಬ್ರಹ್ಮಯ್ಯ ಮೊದಲಾದ ಶರಣರು ಬಸವಣ್ಣನ ಸಮಕಾಲೀನರೆಂಬುದು ಬಸವ ಪುರಾಣಾದಿ ಗ್ರಂಥಗಳಲ್ಲಿ ಸುಸ್ಪಷ್ಟವಾಗಿದೆ.

# ಬಸವ್ರೋದಾಹರಣದ ಶುದ್ಧಾಶುದ್ಧಗಳು

"ಗಚ್ಛತಃ ಸ್ಖಲನಂಕ್ವಾಪಿ ಭವತ್ಯೇವವಿಪಶ್ಚಿತಃ" ಎಂದರೆ "ನಡೆವರೆಡಹದೆ ಕುಳಿತರೆಡಹುವರೆ?" ಎಂಬ ಮಹಾಕವಿಯ ಉಕ್ತಿಯಂತೆ ಪ್ರೌಢ ಶೈಲಿಯಲ್ಲಿ ಬರೆದಿರುವ ಈ ಗ್ರಂಥಕ್ಕೆ ಟಿಪ್ಪಣಿಯನ್ನು ಶ್ರೀ ಶಾಸ್ತ್ರಿಗಳವರ ಪ್ರೇರಣೆಯಂತೆ ಬರೆಯುವಾಗ ಅನೇಕ ತೊಡಕುಗಳಿಗೆ ಸಿಕ್ಕಿದ್ದ ನಿಮಿತ್ತವಾಗಿಯೂ, ಬೇರೆ ಪ್ರತಿಯು ಸಿಕ್ಕದೆ ಕೇವಲ ಒಂದೇ ಪ್ರತಿಯನ್ನು ಆಧಾರವಾಗಿ ಇಟ್ಟುಕೊಂಡು ಬರೆಯಬೇಕಾಗಿ ಬಂದುದರಿಂದಲೂ, ಅಲ್ಲದೆ ಮುದ್ರಣ ಕಾಲದಲ್ಲಿ ಸರಿಪಡಿಸಲು ಕಾರ್ಯಾಂತರಾಸಕ್ತತೆಯಿಂದ ಅವಕಾಶ ದೊರೆಯದೆ ಇದ್ದುದರಿಂದಲೂ, ಅನಿವಾರ್ಯವಾಗಿ ಕೆಲವು ತಪ್ಪುಗಳು ಬಿದ್ದಿವೆ. ಇದನ್ನು ಅರ್ಧ ಮುದ್ರಿಸಿದಮೇಲೆ ಬೇರೊಂದು ಪ್ರತಿಯು ಸಿಕ್ಕಿದ್ದರಿಂದ ಪಾಠಾಂತರಗಳನ್ನು ಸೂಚಿಸದೆ ಇಲ್ಲಿ ಸೂಚಿಸಿರುವಂತೆ ಪಾಠಕರು ದಯದಿಂದ ತಿದ್ದಿಕೊಳ್ಳಬೇಕಾಗಿ ವಿನಂತಿ : —

ಟಿಪ್ಪಣಿ ಕರ್ತಾ

| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ೨ | ೧೨ | ನಾದವನು | ನಾದವನೂ |
| ,, | ೧೪ | ರುವವನು | ರುವವನೂ |
| ೩ | ೨ | ಜಯೆ | ಜಯೇ |
| ,, | ೧೩ | ವಚನವಂತ | ಗೀತಾವಚನವಂತೆ |
| ,, | ೨೦ | ಬೋಧಕನು ಆದ | ಬೋಧಕನಾದ |
| ೪ | ೯ | ನಿರಸರ | ನಿರಸನ |
| ೬ | ೨ | ವರದಲ್ಲಿರುವ | ವರದಲ್ಲಿ |
| ೭ | ,, | ಸಾರ | ಸಾರಃ |
| ,, | ೪ | ಸಮೇತ | ಸಮೇತಃ |
| ,, | ೪ | ಗೀತ | ಗೀತಃ |

| | | | |
|---|---|---|---|
| ,, | ೧೩ | ಮಂದರಾದಿ | ಮಂದ್ರಾದಿ |
| ,, | ೧೫ | ಕೂಡಿದ್ದಾಗಿಯೂ | ಕೂಡಿದವನಾಗಿಯೂ |
| ,, | ೧೮ | ಗಾನದಿಂದಲೂ | ಗಾನದಿಂದಲೂ ಕೂಡಿರುವ |
| ,, | ೨೫ | ಕಾವುಳ | ಕಾವುಳನಾರಾಟ |
| ೮ | ೬ | ಮಂದರಾದಿ | ಮಂದ್ರಾದಿ |
| ,, | ೯ | ಮಾಡುತ್ತ | ಮಾಡುತ್ತಾ |
| ,, | ೨೦ | ಕ್ಷ್ಮ್ರಹೆ | ಕ್ಷ್ಮ್ರಹೇ |
| ೯ | ೭ | ಆಕ್ಷ್ಮ್ರಹೇ | ಆಚಕ್ಷ್ಮ್ರಹೇ |
| ,, | ೨೦ | ಅಸ್ತಿಕ್ಯ | ಆಸ್ತಿಕ್ಯ |
| ೧೦ | ೨ | ಕರಕಮಲತಲ | ಕರತಲಯುಗಳ |
| ,, | ೫ | ,, | ಕರತಲಯುುಗಳ |
| ,, | ೬ | ಕರಸ್ಥಳದಲ್ಲಿ | ಕರಗಳಿಂದ |
| ,, | ೧೭ | ಯಾವ | ಯಾವು |
| ,, | ೨೪ | ಣ್ಯೈ | ವ್ಯೈ |
| ೧೧ | ೧೨ | ಯಸ್ನು | ಯನ್ನು |
| ೧೨ | ೩ | ಆತುಲ | ಅತುಲ |
| ,, | ೨೧ | ಆಸಂ | ಅಸಂ |
| ೧೪ | ೧೨ | ಸ್ಪರ್ಧತೆ | ಸ್ಪರ್ಧತೇ |
| ೧೫ | ೩ | ಶಿವಮಾ | ಶ್ರೀಮಾ |
| ,, | ೭ | ಬಸವೆಶ | ಬಸವೇಶ |
| ,, | ೨೪ | ಸ್ಪರ್ಧತೆ | ಸ್ಪರ್ಧತೇ |
| ,, | ೨೫ | ವ್ಯೇ | ವ್ಯೈ |
| ೧೬ | ೮ | —ಶ್ವರ | —ಶ್ವರರಾದ |
| ,, | ೮ | —ಶೈವ | —ಶೈವರ |
| ,, | ೬ | ಕರ್ಮಣವನ್ನು | ಮಲತ್ರಯವನ್ನು |
| ,, | ೭ | ಯೋಜನಾ | ಯೋಜನಾರೂಪ |

| | | | |
|---|---|---|---|
| ,, | ,, | ಸಾತ್ಮಕ | ಜ್ಞಾನಾತ್ಮಕ |
| ,, | ,, | ವೇಧ | ವೇಧಾ |
| ,, | ೨೦ | ಶ್ರೀಲ | ಶ್ರೀ |
| ೧೯ | ೯ | ಆಗಿಯೂ | ಆಗಿ |
| ೨೦ | ೨೨ | ಬೌದ್ಧಮುಖಗಳ | ಬೌದ್ಧ |
| ೨೩ | ೫ | ಜ್ವಾಲ | ಜಾಲ |
| ,, | ೬ | ಪಾದಾರ | ಪದಾರ |
| ೨೫ | ೧೩ | ಶತ್ರುವನ್ನು | ಶತ್ರುಗಳನ್ನು |
| ೨೬ | ,, | ವ್ಯಕ್ತವಾಗಿರುವ | ವ್ಯಕ್ತವಾಗುವ |
| ೨೭ | ೧೪ | ಭಜೆ | ಭಜೇ |
| ೨೯ | ೧೦ | ವಾಗಿ | ನಾಗಿ |
| ೩೦ | ೧೯ | ಭಕ್ತಿಯೆನ್ನು | ಭಕ್ತಿಯನ್ನು |
| ೩೨ | ,, | ಶ್ರವಣಮಾಡಿ | ಶ್ರವಣಾದಿಗಳನ್ನು ಮಾಡಿ |
| ೩೩ | ೧೨ | ಬಸವೇಶನು | ಬಸವೇಶನೇ ! |
| ೪೦ | ೧ | ಶ್ರೀ ಶಿವಶಿವಜ್ಞಾನಾದಿ | ಶ್ರೀವಜ್ಞಾನಾದಿ ಶಿವಭಕ್ತಿ |
| ೪೨ | ೧೧ | ವರ್ಣಾಭರಣ | ಸುವರ್ಣಾಭರಣ |
| ,, | ೧೨ | ಜಿ | ಜೀ |



